


# ಶಿಕ್ಷಣದಲ್ಲಿ ಮೌಲ್ಯಬೋಧನೆಯ ಸ್ಥಾನ

ಪ್ರೊ. (ಶ್ರೀಮತಿ) ಸುಶೀಲಾ ಜಿ. ದೇಸಾಯಿ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮೇ, ೧೯೯೦

ಉಪನ್ಯಾಸ ಗ್ರಂಥಮಾಲೆ

೪೧೬

# ಶಿಕ್ಷಣದಲ್ಲಿ ಮೌಲ್ಯಬೋಧನೆಯ ಸ್ಥಾನ

ಪ್ರೊ. (ಶ್ರೀಮತಿ) ಸುಶೀಲಾ ಜಿ. ದೇಸಾಯಿ







ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಮೇ, ೧೯೯೧

ಪ್ರಕಾಶಕರು :
ರು. ಮ. ಷಡಕ್ಷರಯ್ಯ
ಕಾರ್ಯನಿರ್ವಾಹಕ ನಿರ್ದೇಶಕರು
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ಮೇ, ೧೯೬೧



ಬೆಲೆ ರೂ. ೧-೦೦

ಮುದ್ರಕರು :
ಜೆ. ಬಿ. ಮನ್ವಾಚಾರ
ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೪೧೫ ಪುಸ್ತಿಕೆಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಎಸ್. ರಾಮೇಗೌಡ**
ಕುಲಪತಿಗಳು

## ಅರಿಕೆ

ಇಂದು ನಾವು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ವೈಜ್ಞಾನಿಕವಾಗಿ ಹಾಗೂ ತಾಂತ್ರಿಕವಾಗಿ ಸಾಕಷ್ಟು ಪ್ರಗತಿಯನ್ನು ಹೊಂದಿದ್ದೇವೆ. ಸ್ವಾತಂತ್ರ್ಯದ ನಂತರ ಎಷ್ಟೇ ಅಡೆತಡೆಗಳು ಬಂದರೂ ಅವುಗಳನ್ನು ಬಗೆಹರಿಸಿಕೊಂಡು ಮುಂದೆ ಸಾಗಿದ್ದೇವೆ. ಶಿಕ್ಷಣ ಕ್ಷೇತ್ರದಲ್ಲಿ ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೂ ಊಹಿಸಲಾರದಷ್ಟು ಬದಲಾವಣೆಗಳನ್ನು ಕಂಡಿದ್ದೇವೆ. ಹೊಸ ಹೊಸ ವಿಧಾನಗಳ ಮೂಲಕ ಬೋಧನೆ ಹಾಗೂ ಕಲಿವು ಸಾಗಿದೆ. ವಿದ್ಯಾರ್ಥಿಗಳು ಓದು–ಬರಹದ ಜೊತೆಗೆ ಅನೇಕ ಕೌಶಲ್ಯಗಳನ್ನು ಪಡೆಯುವಂತಾಗಿದೆ. ಅವರ ಸರ್ವತೋಮುಖ ಅಭಿವೃದ್ಧಿಗೆ ಪ್ರಯತ್ನಿಸಲಾಗುತ್ತದೆ. ಆದಾಗ್ಯೂ ಏನೋ ಒಂದು ಕೊರತೆ ಕಂಡು ಬರುತ್ತಿದೆ. ವಿದ್ಯೆ ಕಲಿತವರಲ್ಲಿ, ಕಲಿಯುವವರಲ್ಲಿ ಹಾಗೂ ಸಮಾಜದ ಜನರಲ್ಲಿ ನೈತಿಕತೆಯೇ ಇಲ್ಲ. ಈ ಗುಣವನ್ನು ಬೆಳೆಸುವಲ್ಲಿ ಶಿಕ್ಷಣ ಅಸಫಲವಾಗಿದೆ. ಆದ್ದರಿಂದ ನೈತಿಕ ಅಥವಾ ಮೌಲ್ಯ ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ಕೊಡಬೇಕಾಗಿದೆ.

ನಮ್ಮ ದೇಶದ ಸಂಸ್ಕೃತಿ–ಸಂಪ್ರದಾಯ ಇಡೀ ಜಗತ್ತಿನಲ್ಲಿಯೇ ಉನ್ನತವಾದುದು. ಅದನ್ನು ಮರೆತು ಶಿಕ್ಷಣ ಪಡೆದುದಾದರೆ ಅದು ನಿಷ್ಪ್ರಯೋಜಕ. ಆದ್ದರಿಂದ ನಮ್ಮ ದೇಶದ ಸಂಸ್ಕೃತಿ–ಸಂಪ್ರದಾಯದ ರಕ್ಷಣೆಯ ಜೊತೆಗೆ, ಉತ್ತಮ ಗುಣಗಳನ್ನು ಪಡೆದು ಮಾನವೀಯತೆಯನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಅಂತಹ ಶಿಕ್ಷಣಕ್ಕಾಗಿ ಇಂದು ಹುಡುಕಾಟ ಹಾಗೂ ಪ್ರಯತ್ನಗಳು ನಡೆದಿವೆ.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಹಂತದಲ್ಲಿ ಮೌ
ಶಿಕ್ಷಣವನ್ನು ಪಠ್ಯ ಹಾಗೂ ಪಠ್ಯೇತರ ವಿಷಯಗಳ ಮೂ
ಕಡ್ಡಾಯವಾಗಿ ಬೋಧಿಸಬೇಕೆಂದು ರಾಷ್ಟ್ರೀಯ ಶಿಕ್ಷಣ ನಿ
ಯಲ್ಲಿ ತಿಳಿಸಲಾಗಿದೆ. ಹೀಗಾಗಿ ಮೌಲ್ಯ ಶಿಕ್ಷಣ ಮುಂಬರು
ದಿನಗಳಲ್ಲಿ ಒಂದು ಹೊಸ ಸ್ಥಾನವನ್ನು ಪಡೆಯಲಿದೆ.

ಕರ್ನಾಟಕ ವಿಶ್ವವಿದ್ಯಾಲಯದವರು ವಿಜಾಪುರ ಜಿಲ
ಇಂಡಿ ತಾಲೂಕ ಎಸ್. ಬಿ. ಸಂ. ಪ. ಪೂ. ಕಾಲೇಜು ಹಿರೇರೂ
ಬೋಳೆಗಾಂವದಲ್ಲಿ ನಡೆಸಿದ ೩೭೧ ನೇ ವ್ಯಾಸಂಗ ವಿಸ್ತರಣ ಶಿ
ದಲ್ಲಿ ಮಾಡಿದ ಉಪನ್ಯಾಸದ ಆಧಾರದ ಮೇಲೆ ಈ ಕಿರುಹೊತ್ತಿ
ಯನ್ನು ಬರೆಯಲಾಗಿದೆ. ಉಪನ್ಯಾಸ ಮಾಡಲು ಹಾಗೂ ಚ
ಸಿದ ವಿಷಯದ ಮೇಲೆ ಬರೆಯಲು ಕರೆ ಕೊಟ್ಟು ಪ್ರೋತ್ಸಾಹಿ
ಅಂದಿನ ನಿರ್ದೇಶಕರಾದ ಶ್ರೀ. ಎಸ್. ಬಿ. ನಾಯಕ ಅವರಿ
ಸಹಾಯಕ ನಿರ್ದೇಶಕರಾದ ಶ್ರೀ. ಎಲ್. ಎಂ. ಗುಡ್ಡೀನ ಅವರಿ
ನನ್ನ ಕೃತಜ್ಞತೆಗಳು. ನಮ್ಮ ಶಿಕ್ಷಣ ಮಹಾವಿದ್ಯಾಲಯ, ವಿಜಾ
ಇದರ ಪ್ರಾಚಾರ್ಯರಾದ ಶ್ರೀ. ಎನ್. ಜಿ. ಕರೂರವರು
ಉಪನ್ಯಾಸ ಶಿಬಿರದಲ್ಲಿ ಪಾಲ್ಗೊಳುವಂತೆ ಪ್ರೋತ್ಸಾಹಿಸಿ, ವಿಷ
ಸಂಗ್ರಹಣೆ ಹಾಗೂ ಚರ್ಚೆ ಮೂಲಕ ನನಗೆ ಸ್ಫೂರ್ತಿ ತುಂಬಿ ಬೆ
ಲಿಸಿದ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಶಿಕ್ಷಣ ಮಹಾವಿದ್ಯಾಲಯ,
ಬಿಜಾಪುರ

**ಸುಶೀಲಾ ಜಿ. ದೇಸಾ**

# ಪರಿವಿಡಿ

# ೧. ಪೀಠಿಕೆ

ಭಾರತ ದೇಶವು ಉತ್ತಮ ಸಂಸ್ಕೃತಿ ಸಂಪ್ರದಾಯದ ನೆಲೆವೀಡು. ರಾಮಾಯಣ–ಮಹಾಭಾರತಗಳಂತಹ ಚಾರಿತ್ರಿಕ ಕಥೆಗಳು ಭಾರತೀಯರಿಗೆ ಮಾರ್ಗದರ್ಶಿಗಳು. ಒಳ್ಳೆಯದನ್ನು ತಿಳಿಸಿ ಒಳ್ಳೆಯದನ್ನು ಬೋಧಿಸುವುದೇ ರಾಮಾಯಣ. ಕೆಟ್ಟದ್ದನ್ನು ತಿಳಿಸಿ ಒಳ್ಳೆಯದನ್ನು ಬೋಧಿಸುವುದೇ ಮಹಾಭಾರತ. ಇಂದು ಮಾನವ ಶಿಕ್ಷಣ ಪಡೆಯುವುದು ಕೇವಲ ಚಾರಿತ್ರ್ಯಕ್ಕೋಸ್ಕರ. ಉತ್ತಮಾಂಶಗಳನ್ನು ಹಾಗೂ ಮಾನವೀಯ ಗುಣಗಳನ್ನು ಪಡೆಯುವುದಕ್ಕೋಸ್ಕರ ಎಂದು ಹೇಳಬಹುದು. ಪ್ರಾಚೀನ ಕಾಲದಿಂದ ಇಂದಿನವರೆಗೂ ಮಾನವ ಸುಸಂಸ್ಕೃತನಾಗಲು, ಉತ್ತಮ ನಾಗರಿಕನೆನಿಸಿಕೊಂಡು ಉತ್ತಮ ಜೀವನ ನಡೆಸಲು ಪ್ರಯತ್ನಿಸುತ್ತಲೇ ಬಂದಿದ್ದಾನೆ. ಇದಕ್ಕೆ ಅನೇಕ ಸಹಕಾರಗಳಿವೆ. ಮನೆ. ಮಠ, ಮಸೀದೆ. ಚರ್ಚ ಹಾಗೂ ಶಾಲೆ ಕಾಲೇಜುಗಳು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ನೈತಿಕ ಬೋಧನೆಯನ್ನು ಮಾಡುತ್ತ ಬಂದಿವೆ. ಹೀಗೆ ಧಾರ್ಮಿಕ ಸಂಸ್ಥೆಗಳು ಮಿಗಿಲಾದ ಕಾರ್ಯಗಳನ್ನು ಮಾಡುತ್ತ ಬಂದಿದ್ದು. ಇಂದು ಈ ಕಾರ್ಯವನ್ನು ಶಾಲೆ ಕಾಲೇಜುಗಳು ಮಾಡಬೇಕಾಗಿದೆ.

ಕೇವಲ ನೂರು ವರ್ಷಗಳ ಹಿಂದೆ ಮಾನವನ ಜೀವನವನ್ನು ರೂಪಿಸುವ ಮೌಲ್ಯಗಳಲ್ಲಿ ನಾಲ್ಕು ಮುಖ್ಯವಾಗಿದ್ದವು.

೧) ಧರ್ಮ
೨) ಶಿಕ್ಷಣ
೩) ಸಾಮಾಜಿಕ ನೀತಿ ಹಾಗೂ
೪) ರಾಜನೀತಿ (ನ್ಯಾಯ)

ಆದರೆ ಕಳೆದ ೫ ೬ ದಶಕಗಳಲ್ಲಿ ಆ ಮೌಲ್ಯಗಳು ನಶಿಸುತ್ತ ಹೋಗಿವೆ
ಧರ್ಮ ತನ್ನ ತಿರುಳನ್ನೇ ಕಳೆದುಕೊಂಡಿದೆ. ವಿದ್ಯಾರ್ಥಿಗಳಲ್ಲಿಯ
ಸುಪ್ತ–ಶಕ್ತಿಗಳನ್ನು ಹೊರಗೆಳೆಯದೆ, ವಿಷಯ ಸಂಗ್ರಹಣೆ ಮಾ
ಮಾಡಿ ಶಿಕ್ಷಣವೂ ಸಂಕುಚಿತಗೊಂಡಿದೆ. ಕೌಟುಂಬಿಕ ಹಾಗೂ
ಜೀವನದಲ್ಲಿ ಐಕ್ಯತೆಯಿಲ್ಲದಾಗಿ ವಿರಸ ಉಂಟಾಗಿದೆ. ರಾಜನೀ
ತನ್ನ ಘನತೆಯನ್ನು ಕಳೆದುಕೊಂಡು ಕೀಳು ದರ್ಜೆಯ ರಾಜಕೀಯ
ವಾಗಿದೆ. ಈ ರೀತಿ ಅಳಿದುಳಿದ ಮೌಲ್ಯಗಳ ಪ್ರತಿಷ್ಠಾಪನೆ
ಗಾಗಿ ಸರಿಯಾದ, ಅರ್ಥಪೂರ್ಣ, ಕ್ರಿಯಾತ್ಮಕ ಹಾಗೂ ಮೌಲ್ಯ
ಧಾರಿತ ಶಿಕ್ಷಣವನ್ನು ಇಂದು ಮಕ್ಕಳಿಗೆ ನೀಡಬೇಕಾಗಿದೆ.

ಅಸಂಖ್ಯಾತ ಜೀವರಾಶಿಗಳ ಸೃಷ್ಟಿಯಲ್ಲಿ ಮನುಷ
ಜೀವಿಯ ನಿರ್ಮಾಣ ಅಪೂರ್ವ. ಪ್ರಾಚೀನ ಕಾಲದಲ್ಲಿ ಪ್ರಾ
ಗಳ ಜೊತೆ ಪಶುಗಳಂತೆ ಜೀವನ ನಡೆಸುತ್ತಿದ್ದ ಮಾನವ ಕಾ
ಕ್ರಮೇಣ ತನ್ನ ಬುದ್ಧಿಶಕ್ತಿ ಬಲದಿಂದ ಇತರ ಪ್ರಾಣಿಗಳಿಂ
ಬೇರ್ಪಟ್ಟು ವಿಶಿಷ್ಟ ಜೀವನ ನಡೆಸಹತ್ತಿದನು. ಏನನ್ನಾದರೂ
ಸಾಧಿಸುತ್ತಲೇ ಇರಬೇಕೆಂಬ ಅದಮ್ಯ ಉತ್ಸಾಹದಿಂದ ಪ್ರಗ
ಹೊಂದುತ್ತ ನಡೆದ. ಇದಕ್ಕೆ ಅವನಲ್ಲಿರುವ ಶ್ರೇಷ್ಠ ಗುಣಗಳ
ಆದರ್ಶಗಳು ಅಥವಾ ಮೌಲ್ಯಗಳೇ ಕಾರಣ. ಪ್ರತಿನಿತ್ಯ ಬದುಕಿನ
ಕಂಡುಬರುವ ವರ್ತನೆಗಳಲ್ಲಿ ಮೌಲ್ಯಗಳು ಪ್ರದರ್ಶಿಸಲ್ಪಡುತ್ತವ
ಈ ಮೌಲ್ಯಗಳಿಂದಲೇ ವ್ಯಕ್ತಿಯ ವ್ಯಕ್ತಿತ್ವವನ್ನು ಅಳೆಯಲಾಗ

ತ್ತದೆ. ಮೌಲ್ಯಗಳು ಇಲ್ಲದೇ ಹೋದಲ್ಲಿ ಆತನನ್ನು ಪಶುಗಿಂತ ಕಡೆ ಎಂದು ತಿಳಿಯಲಾಗುತ್ತದೆ. ಆದ್ದರಿಂದ 'ಅಡಿಕೆಗೆ ಹೋದ ಮಾನ, ಆನೆ ಕೊಟ್ಟರೂ ಬಾರದು' ಎಂಬಂತೆ ಮಾನವನಿಗೆ ಸಮಾಜದಲ್ಲಿ ಉತ್ತಮ ರೀತಿಯಿಂದ ಬದುಕಲು ಮೌಲ್ಯಗಳು ಅತೀ ಅವಶ್ಯಕವೆನಿಸಿವೆ. ಇದೇ ಅರ್ಥವನ್ನು ಇಂಗ್ಲೀಷಿನಲ್ಲಿ ಹೀಗೆ ಹೇಳಲಾಗಿದೆ.

When wealth is lost
    nothing is lost.
When health is lost
    something is lost.
When Character is lost
    every thing is lost.

ಇಲ್ಲಿ 'Character' ಎಂದು ಬಳಸಲಾದ ಪದದ ಅರ್ಥ ನಡತೆ ಅಥವಾ ಶೀಲ ಎಂದು ತಿಳಿಯಲಾಗಿದೆ. ಈ ಶೀಲವನ್ನು ಮೌಲ್ಯಗಳು ನಿರ್ಧರಿಸುತ್ತವೆ. ಆದ್ದರಿಂದ ಈ ಮೌಲ್ಯಗಳನ್ನು ಬಿಟ್ಟು ಬದುಕು ಸಾಧ್ಯವಿಲ್ಲ. ಇದಕ್ಕೆ ಯಾವುದೇ ಜನಾಂಗ, ನಾಗರಿಕತೆ, ದೇಶ, ಸಮಾಜ ಮತ್ತು ಸಮುದಾಯಗಳು ಮೌಲ್ಯಗಳನ್ನು ಬಿಟ್ಟು ಬದುಕಿಲ್ಲವೆಂಬುದನ್ನು ಇತಿಹಾಸ ಸಾರಿ ಹೇಳುತ್ತದೆ. ಹೀಗಾಗಿ ಇಂದಿನ ಆಧುನಿಕ ವೈಜ್ಞಾನಿಕ ಹಾಗೂ ತಾಂತ್ರಿಕ ಜಗತ್ತಿನಲ್ಲಿಯೂ ಮೌಲ್ಯಗಳು ಅವಶ್ಯವೆನಿಸಿವೆ.

ಮುಂದುವರಿಯುತ್ತಿರುವ, ವೈಜ್ಞಾನಿಕವಾಗಿ ಪ್ರಗತಿ ಹೊಂದುತ್ತಿರುವ ದೇಶದಲ್ಲಿ ಹಾಗೂ ಬದಲಾಗುತ್ತಿರುವ ಸಮಾಜದಲ್ಲಿ ಮನುಷ್ಯನ ಜೀವನವು ಯಾಂತ್ರಿಕವಾಗಹತ್ತಿದೆ. ಹೊಸ ಹೊಸದನ್ನು ಕಂಡು ಹಿಡಿಯುವ ಆಶೆಯಿಂದ ಮಾನವ ಮುಂದೆ

ಹೋಗುತ್ತಿದ್ದಾನೆ. ಹೀಗಿರುವ ಮನುಷ್ಯನ ಮಹಾನ್ ಬಯಕೆಯು ಅತೀವ ಸಂತೋಷವನ್ನುಂಟು ಮಾಡುತ್ತದೆ. ಆದರೆ ಅದೇ ಸಮಯದಲ್ಲಿ, ಅದೇ ಸಮಾಜದಲ್ಲಿ ಒಂದೆಡೆ ಕಳ್ಳತನ, ಮೋಸ, ವಂಚನೆ, ಕೊಲೆ, ಜಾತೀಯ ಗಲಭೆಗಳು, ಮುಂತಾದ ಅಹಿತಕರ ಘಟನೆಗಳು ನಡೆಯುತ್ತಿವೆ. ಇದರಿಂದಾಗಿ ಆತನ ಮನಸ್ಸು ತತ್ತರಿಸಿ ಅಲ್ಲೋಲ ಕಲ್ಲೋಲವಾಗುತ್ತಿದೆ. ಇದೇ ಕಾರಣದಿಂದಾಗಿ, ಸಂತೋಷದೊಡನೆ ಅಸಮಾಧಾನವನ್ನು ಕೂಡ ಆತ ಹೊಂದಿದ್ದಾನೆ. ಒಂದೆಡೆಗೆ ಅಭಿವೃದ್ಧಿಯ ಸಂಭ್ರಮ ಇನ್ನೊಂದೆಡೆಗೆ ನೈತಿಕ ಮಟ್ಟದ ಕುಸಿತವನ್ನು ಕಾಣುತ್ತಲಿದ್ದೇವೆ. ಮುಂದೆ ಬರುವ ಜನಾಂಗವು ಎಲ್ಲ ಸಂದಿಗ್ಧವಾದ ಭಯ ಮಿಶ್ರಿತ ವಾತಾವರಣದಲ್ಲಿ ಬೆಳೆಯುವುದೋ ಎಂಬ ವಿಚಾರ ನಮ್ಮಲ್ಲಿ ಉದ್ಭವಿಸುವುದು ಸಹಜ. ಆದರೆ ಇಂತಹ ಸಮಾಜ ನಿರ್ಮಾಣಕ್ಕೆ ಎಡೆ ಮಾಡಿಕೊಡದೆ ಸುಬಾಳ್ವೆಯೊಂದಿಗೆ, ಒಳ್ಳೆಯ ಸಮಾಜದ ನಿರ್ಮಾಣವಾಗಬೇಕೆಂಬುದು ಎಲ್ಲರ ಮನಸ್ಸಿನ ಹೆಬ್ಬಯಕೆಯಾಗಿದೆ. ಯಾವುದೇ ವ್ಯಕ್ತಿಗೆ ಕೆಟ್ಟವನಾಗಬೇಕೆಂಬ ಆಸೆ ಇರುವುದಿಲ್ಲ. ಆದರೆ ಸಮಯ-ಸಂದರ್ಭ ಹಾಗೂ ಪರಿಸರ-ಪರಿಸ್ಥಿತಿಗಳು ಅವನನ್ನು ಹಾಗೆ ವರ್ತಿಸುವಂತೆ ಪ್ರಚೋದಿಸುತ್ತವೆ. ಇಂತಹ ಸಮಯದಲ್ಲಿ ನಮ್ಮಲ್ಲಿ ನಶಿಸಿ ಹೋಗುತ್ತಿರುವ ಆತ್ಮಸ್ಥೈರ್ಯ, ಸ್ವಯಂವಿಶ್ವಾಸ, ಆತ್ಮೀಯತೆ ಮುಂತಾದ ಗುಣಗಳನ್ನು ಅಭಿವೃದ್ಧಿಪಡಿಸಿಕೊಳ್ಳುವುದು ಅವಶ್ಯಕ. ಒಳ್ಳೆಯ ಪರಿಸರದ ನಿರ್ಮಾಣವಾಗಿ ಪ್ರತಿಯೊಬ್ಬ ವ್ಯಕ್ತಿಯು ಇಂತಹ ಗುಣಗಳನ್ನು ಬೆಳೆಸಿಕೊಂಡರೆ ಉತ್ತಮವಾದ ಸಮಾಜದ ರಚನೆಯಾಗುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಸಹಾಯಕವಾಗುವ ಮಹಾ ಅಸ್ತ್ರವೆಂದರೆ ಶಿಕ್ಷಣ ಒಂದೇ.

ಶಿಕ್ಷಣವು ಸಾರ್ವತ್ರಿಕಗೊಳ್ಳುವ ಪೂರ್ವದಲ್ಲಿ ಒಳ್ಳೆಯ ಸಮಾಜದ ಸೇವೆಗೆಗೆ ಧಾರ್ಮಿಕ ಸಂಸ್ಥೆಗಳು ಸಹಾಯಕವಾಗುತ್ತಿದ್ದವು. ವಿವಿಧ ಮತ, ಧರ್ಮಗಳ ಮುಖ್ಯಸ್ಥರು ತಮ್ಮ ತಮ್ಮ ಧರ್ಮಾನುಸಾರ ಒಳ್ಳೆಯ ವ್ಯಕ್ತಿಯಾಗಲು ಅವಶ್ಯಕವಾದ ಶಿಕ್ಷಣವನ್ನು ನೀಡುತ್ತಿದ್ದರು. ಇದರಿಂದಾಗಿ ಎಷ್ಟೋ ಜನರು ಒಳ್ಳೆಯ ವ್ಯಕ್ತಿಗಳಾದರು. ಇನ್ನೂ ಅನೇಕರು ಧಾರ್ಮಿಕ ಕಟ್ಟು ಪಾಡಿನಲ್ಲಿ ಸಿಲುಕಿಕೊಂಡರು. ಎಳೆಯ ಮಕ್ಕಳು ಅವರನ್ನು ಅನುಕರಣೆ ಮಾಡ ತೊಡಗಿದರು. ಹೀಗಾಗಿ ವ್ಯಕ್ತಿ ಧಾರ್ಮಿಕವಾಗಿ ಪ್ರಬುದ್ಧನಾಗಲು ಪ್ರಚೋದನೆಗೊಂಡನೆ ಹೊರತು ಸಾಮಾಜಿಕವಾಗಿ ಅಲ್ಲ. ಇದರಿಂದ ಅನೇಕ ಜಾತೀಯ ಗಲಭೆಗಳು ಹುಟ್ಟಿಕೊಂಡವು. ಇದನ್ನು ಹೋಗಲಾಡಿಸಲು ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲಾಯಿತು.

ಇಂದು ಸಮಾಜದಲ್ಲಿ ಹಲವಾರು ಜಾತಿ–ಪಂಗಡಗಳ ಜನರು ಒಟ್ಟುಗೂಡಿ ಜೀವಿಸುವಾಗ ಧಾರ್ಮಿಕ ಸಂಸ್ಥೆಗಳು ಸಮರ್ಪಕವಾಗಿ ಕೆಲಸ ಮಾಡಲಾರವು. ಮಾಡಿದರೂ ಧಾರ್ಮಿಕ ಶಿಕ್ಷಣ ದೊರಕುವುದೇ ಹೊರತು ಜಾತ್ಯಾತೀತ ರೀತಿಯಲ್ಲಿ ಶಿಕ್ಷಣ ದೊರಕದು. ಇಂತಹ ಸಮಯದಲ್ಲಿ ಮಕ್ಕಳಿಗೆ ಉತ್ತಮ ಶಿಕ್ಷಣ ಹಾಗೂ ನೈತಿಕತೆ ಬೆಳೆಸುವಲ್ಲಿ ಹೆಚ್ಚು ಸಹಾಯಕವಾಗುವ ಸಂಸ್ಥೆಗಳೆಂದರೆ ಶಿಕ್ಷಣ ಸಂಸ್ಥೆಗಳು. ಈ ಶಿಕ್ಷಣ ಸಂಸ್ಥೆಗಳು ವಿಷಯಗಳ ಮೂಲಕ ಮಕ್ಕಳಲ್ಲಿ ಉತ್ತಮ ಮೌಲ್ಯಗಳನ್ನು ಮೂಡಿಸಬೇಕು. ಶಿಕ್ಷಣ ಹಾಗೂ ಜೀವನದೊಂದಿಗಿನ ಸಂಬಂಧವನ್ನು ಮೌಲ್ಯಗಳು ನಿರ್ಮಿಸುತ್ತದೆ. ಹೀಗಾಗಿ ಅಲ್ಲಿ ಜೀವನಾವಶ್ಯಕವಾದ ನೈತಿಕ ಶಿಕ್ಷಣದ ಅವಶ್ಯಕತೆ ಇದೆ.

ಇಪ್ಪತ್ತೊಂದನೇ ಶತಮಾನದ ಭರಾಟೆಯಲ್ಲಿ ಜ್ಞಾನ-
ವಿಜ್ಞಾನಗಳ ದಾರಿಯನ್ನು ಸಾಕಷ್ಟು ಕ್ರಮಿಸಿದ್ದೇವೆ. ಲೌಕಿ
ವಾಗಿ ಸಾಕಷ್ಟು ಸುಖ–ಸಮೃದ್ಧಿಯನ್ನು ಸಾಧಿಸಿದ್ದೇವೆ. ಸೃಷ್ಟಿಯ
ಗೌಪ್ಯಗಳನ್ನು ಸೆರೆಹಿಡಿಯುವ ಸಾಹಸಕ್ಕೆ ಕೈ ಹಾಕಿದ್ದೇವೆ. ಸಾಗರ
ದಾಚೆಗಿನ ನಾಡುಗಳ ದಿನಪಟಿಗಳನ್ನು ಇದ್ದಲ್ಲಿಂದಲೇ ನೋಡಿ
ತಿಳಿಯುವ ಪ್ರಬಲ ಬೆಳವಣಿಗೆ ನಮ್ಮದಾಗಿದೆ. ಇಡೀ ವಿಶ್ವವನ್ನ
ಚಿಕ್ಕದಾಗಿಸಿಕೊಂಡಿದ್ದೇವೆ. ಆದಾಗ್ಯೂ ಮಾನಸಿಕ ನೆಮ್ಮದಿ
ಯಿಲ್ಲ. ಶಾಂತಿ ಹಾಗೂ ಸಮಬಾಳ್ವೆಯನ್ನು ತಂದು ಕೊಡುವಲ್ಲಿ
ವಿಜ್ಞಾನ ವಿಫಲವಾಗಿದೆ. ಇಂದಿನ ಅಸ್ಥಿರತೆ. ಅತಂತ್ರತೆ ಹಾಗೂ
ಗೊಂದಲಗಳಿಗೆ ಕಾರಣಗಳನ್ನು ಹುಡುಕುವಲ್ಲಿ ನಿರ್ದಿಷ್ಟ ಪಥವನ್ನು
ಅನುಸರಿಸುವಲ್ಲಿ ಯಾರೂ ಮುಂದಾಗಿಲ್ಲ.

'ಇಂದಿನ ಮಕ್ಕಳೇ ನಾಳಿನ ನಾಗರಿಕರು' ಎಂಬುದನ್ನು ಅರಿತ
ಉತ್ತಮ ಸಮಾಜ ಹಾಗೂ ದೇಶ ನಿರ್ಮಾಣಕ್ಕಾಗಿ ಉತ್ತಮ
ವ್ಯಕ್ತಿಗಳನ್ನು ತಯಾರು ಮಾಡುವ ಹೊಣೆ ಶಿಕ್ಷಣದ ಮೇಲಿದೆ
ಪ್ರತಿಯೊಂದು ಶಾಲೆ–ಕಾಲೇಜುಗಳು ಮಕ್ಕಳ ನೈತಿಕ ಮಟ್ಟವನ್ನು
ಸುಧಾರಿಸುವಲ್ಲಿ ಪ್ರಯತ್ನಿಸಬೇಕು. ಅವರಲ್ಲಿ ಸಹಕಾರ. ಸಹಾಯ
ತಾಳ್ಮೆ. ಸತ್ಯ. ಶಾಂತಿ. ತ್ಯಾಗ ಮುಂತಾದ ಗುಣಗಳನ್ನು ಬೆಳೆಸಬೇಕು

## ೨. ಮೌಲ್ಯ ಶಿಕ್ಷಣವೆಂದರೇನು ?

ವ್ಯಕ್ತಿಯ ವರ್ತನೆಯನ್ನು ನಿರ್ಧರಿಸುವ ಅಂಶಗಳನ್ನು ಮೌಲ
ಗಳು ಎನ್ನಬಹುದು. ಜೀವನಕ್ಕೆ ಮಾರ್ಗದರ್ಶಿಕೆಗಳಾದ ಹಾಗೂ

ವ್ಯಕ್ತಿಯು ದೈಹಿಕ. ಮಾನಸಿಕ ಸ್ವಾಸ್ಥ್ಯಕ್ಕೆ ಕಾರಣವಾಗುವ ತತ್ವಗಳು ಇವುಗಳಾಗಿವೆ. ಪ್ರತಿಯೊಂದು ಸಮಾಜವೂ ತನ್ನ ಸದಸ್ಯರು ಒಳ್ಳೆಯ ನಾಗರಿಕರಾಗಬೇಕು, ಆದರ್ಶವ್ಯಕ್ತಿಗಳಾಗಬೇಕು ಹಾಗೂ ಉತ್ತಮ ಜೀವನ ನಡೆಸಬೇಕು ಎಂದು ಬಯಸುತ್ತದೆ. ಅವರಲ್ಲಿ ಇದಕ್ಕೆ ಸಹಾಯ ಮಾಡುವಂತಹ ಕೆಲವು ಗುಣಗಳನ್ನು ನೆಲೆಗೊಳ್ಳುವಂತೆ ಮಾಡುತ್ತದೆ. ಇದಕ್ಕೆ ಶಿಕ್ಷಣ ಸಹಕಾರಿಯಾಗಿದೆ. ಶಿಕ್ಷಣದ ಈ ಸ್ವರೂಪವನ್ನು ಶೀಲ ಶಿಕ್ಷಣ ಅಥವಾ ನೈತಿಕ ಶಿಕ್ಷಣ ಅಥವಾ ಮೌಲ್ಯ ಶಿಕ್ಷಣವೆಂದು ಕರೆಯುತ್ತಾರೆ.

ಬರ್ಟ್ರಾಂಡ್ ರಸೆಲ್‌ರವರ ಪ್ರಕಾರ. 'ಮಾನವನ ಅವಶ್ಯಕತೆಗಳನ್ನು ಸಂತೃಪ್ತಿಗೊಳಿಸುವುದೇ ಮೌಲ್ಯ' ಎಂದಿದ್ದಾರೆ. ಉದಾಹರಣೆ– ಹಣ ಮತ್ತು ಆಹಾರ. ಇವುಗಳು ನಮ್ಮ ಬಯಕೆಗಳನ್ನು ಈಡೇರಿಸುವುದರಿಂದ ಅವುಗಳಿಗೆ ಬೆಲೆ ಕೊಡುತ್ತೇವೆ. ಇದರಂತೆ ಸತ್ಯ. ಅಹಿಂಸೆ. ದಯೆ–ದಾಕ್ಷಿಣ್ಯ. ವಿನಯ. ಕ್ಷಮೆ. ಸರಳತೆ, ತ್ಯಾಗ. ಸಹಕಾರ. ಸಹಾನುಭೂತಿ ಇತ್ಯಾದಿಗಳನ್ನು ಮಕ್ಕಳಿಗೆ ಬೋಧಿಸುವುದನ್ನು 'ಮೌಲ್ಯ ಶಿಕ್ಷಣ' ಎನ್ನುವರು. ಈ ಎಲ್ಲ ಶೀಲಗಳಿಗನುಗುಣವಾಗಿ ಮಕ್ಕಳ ವರ್ತನೆಗಳನ್ನು ರೂಪಿಸುವುದೇ ಶಿಕ್ಷಣದ ಕರ್ತವ್ಯ.

ಸಾರ್ವಜನಿಕ ಶಿಕ್ಷಣ ಇನ್ನೂ ರೂಪುಗೊಳ್ಳದಿದ್ದ ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದಲ್ಲಿ ಮೌಲ್ಯ ಶಿಕ್ಷಣದ ಕೆಲಸವನ್ನು ಧಾರ್ಮಿಕ ಸಂಸ್ಥೆಗಳೇ ನಿರ್ವಹಿಸುತ್ತಿದ್ದವು. ಇದರಿಂದ ಮಾನವೀಯತೆ ಮೊಳಕೆಯೊಡೆಯುತ್ತಿತ್ತು. ಅದರಂತೆ ಅನೇಕ ಮಕ್ಕಳು

ಆದರ್ಶ ಜೀವಿಗಳಾಗಿ ಬಾಳುತ್ತಿದ್ದರು. ಆದರೆ ಇತ್ತೀ ಧಾರ್ಮಿಕ ಸಂಸ್ಥೆಗಳು ಮೊದಲಿನ ಸ್ಥಿತಿಯನ್ನು ಉಳಿಸಿಕೊಂ ಬರಲಿಲ್ಲ. ಸ್ವಾರ್ಥ ಸಾಧನೆ, ಒಬ್ಬರು ಮತ್ತೊಬ್ಬರ ಮೇ ಪ್ರಭುತ್ವ ಸಾಧಿಸಲು ಹೆಣಗಾಡಿದ ಹೇಯ ಕೃತ್ಯಗಳು ಜನ ದಲ್ಲಿ ಧರ್ಮಾಂಧತೆ ಮತ್ತು ಸಂಕುಚಿತ ಮನೋಭಾವನೆ ಬೆಳೆಯಲು ಕಾರಣವಾದವು. ಇದರಿಂದ ಮತ್ತೊಂದು ಧರ್ಮ ಬಗ್ಗೆ ಮತ್ಸರ ಭಾವನೆ ಇಮ್ಮಡಿಗೊಂಡಿತು. ಧರ್ಮಾಧಾ ಮೌಲ್ಯ ಶಿಕ್ಷಣ ಸಮಾಜದಲ್ಲಿ ಶಾಂತಿ, ಐಕ್ಯತೆ, ನೆಮ್ಮದಿ ಸ್ಥಾಪಿ ವುದರ ಬದಲು ಅಶಾಂತಿ ಹಾಗೂ ಅನೈತಿಕತೆಯನ್ನು ಮೂಡಿಸು ಕಾರಣವಾಯಿತು.

ಪ್ರಸ್ತುತ ಸನ್ನಿವೇಶದಲ್ಲಿ ಧರ್ಮವು ಎಲ್ಲೆಲ್ಲಿ ರಾಜ್ಯ ಧ ವಾಗಿದೆಯೋ ಅಂತಹ ದೇಶಗಳನ್ನು ಬಿಟ್ಟು ಬೇರೆ ದೇಶಗ ಮೌಲ್ಯ ಶಿಕ್ಷಣ ಅಥವಾ ನೈತಿಕ ಶಿಕ್ಷಣವನ್ನು ಜಾತ್ಯಾತೀತ ಯಲ್ಲಿ ಕೊಡಲಾಗುತ್ತಿದೆ. ಧರ್ಮವು ರಾಜ್ಯ ಧರ್ಮವಾಗಿ ರಾಷ್ಟ್ರಗಳೆಂದರೆ ಪಾಕಿಸ್ತಾನ, ಅಫಘಾನಿಸ್ತಾನ, ಇರಾನ್–ಇರ ಮುಂತಾದ ಅರಬ್ ರಾಷ್ಟ್ರಗಳಲ್ಲಿ 'ಮುಸ್ಲಿಂ ಧರ್ಮ' ರಾ ಧರ್ಮವಾಗಿದೆ. ಸ್ವತಂತ್ರ ಭಾರತದ ಸಂವಿಧಾನದಲ್ಲಿ ಒಳ್ಳೆ ನೈತಿಕ ಶಿಕ್ಷಣಕ್ಕೆ ಆಧಾರವಾಗುವಂತಹ ಕೆಲವು ಮೌಲ್ಯಗಳ ಉದಾ–ಪ್ರಜಾಪ್ರಭುತ್ವ, ಸಮಾನತೆ, ಜಾತ್ಯಾತೀತತೆ, ಸ್ವಾ ಮುಂತಾದವುಗಳು. ಇವುಗಳನ್ನಷ್ಟೇ ಅಲ್ಲದೆ ಆಧುನಿಕ ಜೀ ದಲ್ಲಿ ಅಗತ್ಯವಾಗಿ ಅನುಸರಿಸಲೇಬೇಕಾದ ಕೆಲವು ಮೌಲ್ಯಗಳ

ಅವುಗಳು ವೈಜ್ಞಾನಿಕ ಮನೋಭಾವನೆ, ಉತ್ಪಾದನೆ, ಪ್ರಗತಿ, ಮಿತ ಸಂತಾನ, ಪರಿಸರ ಸಂರಕ್ಷಣೆ ಮುಂತಾದವುಗಳು.

ಇವುಗಳ ಜೊತೆಗೆ ನಮ್ಮ ರಾಷ್ಟ್ರವು ಕೆಲವು ಪ್ರಾಚೀನ ಮೌಲ್ಯಗಳನ್ನು ಹೊಂದಿದ್ದು ಅವುಗಳನ್ನು ಜನರು ತಮ್ಮ ಸಾಮಾನ್ಯ ಸಾಂಸ್ಕೃತಿಕ ಪರಂಪರೆಯ ಒಂದು ಭಾಗವೆಂದೇ ಸ್ವೀಕರಿಸಿದ್ದಾರೆ. ಅವುಗಳಲ್ಲಿ ಕೆಲವು ಹೀಗಿವೆ–ಸತ್ಯ, ಅಹಿಂಸೆ, ಅನುಕಂಪ, ಶಾಂತಿ, ಕ್ಷಮೆ, ಸಹಿಷ್ಣುತೆ, ಸರಳತೆ, ಜ್ಞಾನಾಕಾಂಕ್ಷಿತ್ವ ಮತ್ತು ಸಹಕಾರ. ಈ ಮೌಲ್ಯಗಳನ್ನು ನಮ್ಮ ದೇಶದ ವಿವಿಧ ಧರ್ಮ ಹಾಗೂ ಸಾಹಿತ್ಯಗಳಲ್ಲಿ ಒತ್ತಿ ಹೇಳಲಾಗಿದೆ. ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ಇತ್ತೀಚೆಗೆ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಅವರು ಬಳಸಿದ ಅಹಿಂಸಾಪರ ಮೌಲ್ಯಗಳಾದ ಸತ್ಯ, ಪ್ರೇಮ, ನ್ಯಾಯ, ಇತ್ಯಾದಿ ಮೌಲ್ಯಗಳಿಗೆ ಹೆಚ್ಚು ಗಮನ ಕೊಡಲಾಗಿದೆ,

ಮಕ್ಕಳಿಗೆ ನೈತಿಕ ಶಿಕ್ಷಣವನ್ನು ಕೊಟ್ಟು ದೇಶದಲ್ಲಿ ಐಕ್ಯತೆ, ಹಾಗೂ ಶಾಂತಿ ನೆಲೆಸುವಂತೆ ಮಾಡಬೇಕಾಗಿದೆ. ಜನರಲ್ಲಿ ವಿಶಾಲ ಮನೋಭಾವನೆ ಮೂಡಿಸಲು ಉತ್ತಮ ಮೌಲ್ಯಗಳು ಹಾಗೂ ಉನ್ನತ ವಿಚಾರಗಳು ಸಹಕಾರಿಯಾಗಿವೆ. ಅಂತಹ ಗುಣಗಳನ್ನು ಬೆಳೆಯುತ್ತಿರುವ ಮಕ್ಕಳಲ್ಲಿ ಶಿಕ್ಷಣದ ಮೂಲಕ ಬೆಳೆಸಬೇಕಾಗಿದೆ. ಇವು ಮಕ್ಕಳಲ್ಲಿ ಪ್ರೇಮ, ಆತ್ಮೀಯತೆ, ವಿಶ್ವಾಸ, ಸಹೋದರತ್ವ, ಸಹಕಾರ ಇತ್ಯಾದಿ ಗುಣಗಳನ್ನು ಅವರಲ್ಲಿ ನೆಲೆಗೊಳ್ಳುವಂತೆ ಮಾಡುತ್ತವೆ. ಇದಕ್ಕೆ ಶಿಕ್ಷಕ, ವಿದ್ಯಾರ್ಥಿ ಹಾಗೂ ಪೋಷಕರು ಸಹಕರಿಸಬೇಕು.

# ೩. ಮೌಲ್ಯ ಶಿಕ್ಷಣದ ಅವಶ್ಯಕತೆ

ಮೌಲ್ಯ ಶಿಕ್ಷಣವು ಪ್ರತಿಯೊಬ್ಬ ವ್ಯಕ್ತಿಗೂ ಅವಶ್ಯವಾಗಿದೆ ಮೌಲ್ಯಗಳಿಲ್ಲದ ವ್ಯಕ್ತಿ ಪರಿಮಳವಿಲ್ಲದ ಪುಷ್ಪದಂತೆ. ಅತನಿ ಸಮಾಜದಲ್ಲಿ ಯಾವುದೇ ರೀತಿಯ ಸ್ಥಾನವಿಲ್ಲ. ಅಂದರೆ ಮೌಲ್ ಗಳಿಲ್ಲದ ವ್ಯಕ್ತಿಯನ್ನು ಕನಿಷ್ಠವಾಗಿ ಕಾಣುತ್ತಾರೆ. ಆದ್ದರಿಂದ ಜೀವನದಲ್ಲಿ ಮೌಲ್ಯಗಳಿಗೂ ವ್ಯಕ್ತಿಗೂ ಸಂಬಂಧವಿದೆ. ಒಬ್ ವ್ಯಕ್ತಿಯನ್ನು ಅವನು ಹೊಂದಿರುವ ಮೌಲ್ಯಗಳ ಆಧಾರವಾ ಉತ್ತಮನೆಂದು ತಿಳಿಯಲಾಗುತ್ತಿದೆ. ಮೌಲ್ಯಗಳು ವ್ಯಕ್ತಿ ವ್ಯಕ್ತಿತ್ವವನ್ನು ರೂಪಿಸುವುದಲ್ಲದೆ ಅವನು ಘನತೆ–ಗೌರವಗಳಿಂ ಬಾಳುವಂತೆ ಮಾರ್ಗದರ್ಶನ ನೀಡುತ್ತವೆ.

ಮಕ್ಕಳಿಗೆ ಶಿಕ್ಷಣದ ಮೂಲಕ ಉತ್ತಮ ಮೌಲ್ಯಗಳನ್ ಬೋಧಿಸಿದರೆ ಉತ್ತಮ ಗುಣಗಳನ್ನು ಪಡೆಯುವರು. ಆದ್ ರಿಂದ ಮೌಲ್ಯಗಳನ್ನು ಪಠ್ಯ ಹಾಗೂ ಪಠ್ಯೇತರ ವಿಷಯಗ ಮೂಲಕ ಬೋಧಿಸುವುದು ಒಳ್ಳೆಯದು. ಬದಲಾವಣೆ ಹೊಂದ ತ್ತಿರುವ ಜಗತ್ತಿನಲ್ಲಿ ಶಿಕ್ಷಣವೂ ಬದಲಾಗುತ್ತಿದೆ. ಅದಕ್ಕನ ಗುಣವಾಗಿ ಶಿಕ್ಷಣ ಕ್ರಮವನ್ನು ರೂಪಿಸುವುದು ಒಳ್ಳೆಯದು ಆರ್ಥಿಕ ಪ್ರಗತಿಯನ್ನೇ ನಂಬಿ ನಡೆಯುತ್ತಿರುವ ಇಂದಿನ ಜನರ ಆಧ್ಯಾತ್ಮದ ಕಡೆಗೆ ಗಮನ ಹರಿಸುವುದಿಲ್ಲ. ಮಾನವೀಯ ಮೌಲ್ಯಗಳ ಸಾಕಾರಮೂರ್ತಿಯಾಗಿದ್ದ ಮಾನವ ಯಾಂತ್ರಿ

ಬದುಕಿಗೆ ಮಾರು ಹೋಗಿ ಮತ್ತು ಕ್ಷಣಿಕ ಸುಖಗಳ ಬೆನ್ನು ಹತ್ತಿ ಶಾಶ್ವತ ಮೌಲ್ಯಗಳನ್ನು ಹಾಗೂ ಆದರ್ಶಗಳನ್ನು ಕಳೆದುಕೊಳ್ಳುತ್ತಿದ್ದಾನೆ. ಅಲ್ಲದೆ ಜೀವನದ ಜಂಜಾಟದಲ್ಲಿ ಮುಳುಗಿ ಮಾನವ ಕುಲದ ಮೌಲ್ಯಗಳನ್ನೇ ಕೈಬಿಟ್ಟಿದ್ದಾನೆ. ಆದ್ದರಿಂದ ನೈತಿಕ ಶಿಕ್ಷಣದ ಅವಶ್ಯಕತೆಯನ್ನು ಈ ಕೆಳಗಿನ ದೃಷ್ಟಾಂತಗಳು ಇನ್ನಷ್ಟು ಒತ್ತಿ ಹೇಳುತ್ತವೆ.

೧) ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಮಹತ್ತರ ಪ್ರಗತಿಯು ಕಂಡುಬಂದಿದ್ದು. ಅದರ ಫಲವಾಗಿ ಜನರ ಜೀವನ ವಿಧಾನವು ಸಂಪೂರ್ಣ ಬದಲಾಗುತ್ತಿರುವುದು ಕಂಡುಬರುತ್ತಿದೆ. ಹಿಂದಿನ ಕಾಲದ ಜೀವನದಲ್ಲಿದ್ದ ಶಾಶ್ವತ ಶಾಂತಿ–ಸುಖಗಳಾಗಲಿ ಸ್ಥಿರತೆಯಾಗಲಿ ಕಂಡುಬರುತ್ತಿಲ್ಲ. ವಿಜ್ಞಾನ ಹಾಗೂ ತಂತ್ರಜ್ಞಾನಗಳನ್ನು ಮನುಕುಲದ ಅಸ್ತಿತ್ವಕ್ಕೆ ಅಪಾಯಕಾರಿಯಾಗಿರುವಂತಹ ಸಮೂಹನಾಶಕ ಆಯುಧಗಳನ್ನು ತಯಾರಿಸಲು ಉಪಯೋಗಿಸಲಾಗುತ್ತದೆ. ಆದ್ದರಿಂದ ನಮ್ಮ ಯುವಕರು ವಿಜ್ಞಾನ ಹಾಗೂ ತಂತ್ರಜ್ಞಾನವನ್ನು ಮನುಕುಲದ ಒಳಿತಿಗಾಗಿ ಉಪಯೋಗಿಸಬೇಕಲ್ಲದೆ ಅದರ ವಿನಾಶಕ್ಕಾಗಿ ಅಲ್ಲ ಎನ್ನುವ ನೈತಿಕ ಪ್ರಜ್ಞೆಯನ್ನು ಕಲಿಯಬೇಕಾಗಿದೆ. ಇನ್ನೊಂದರ್ಥದಲ್ಲಿ ಹೇಳುವುದಾದರೆ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿನ ಪ್ರಗತಿಯನ್ನು ಮಾನವನ ಪ್ರಜ್ಞೆಯ ಬೆಳವಣಿಗೆಗೆ ಹೊಂದುವಂತೆ ಮಾಡಬೇಕಾಗಿದೆ. ಇಲ್ಲದಿದ್ದರೆ ಇದರ ಅಸಮತೋಲನವು ಮನುಕುಲಕ್ಕೆ ವಿನಾಶಕಾರಿಯಾಗಿ ಪರಿಣಮಿಸುವುದು.

೨) ಪ್ರಪಂಚದ ಇತರ ದೇಶಗಳಂತೆ ನಮ್ಮ ದೇಶದಲ್ಲೂ ಸಾಂಪ್ರದಾಯಿಕ ಮೌಲ್ಯಗಳ ಅಧಃಪತನವಾಗಿದೆ. ಧರ್ಮಕ್ಕೆ

ನೈತಿಕ ಬೆಳವಣಿಗೆಗಾಗಿ ಕೊಡುಗೆ ನೀಡಲು ಸಾಧ್ಯವಾಗಿಲ್ಲ. ಆದ್ದ
ರಿಂದ ನಮ್ಮ ಸಮಾಜಕ್ಕೆ ಆಧಾರವಾಗಿರುವ ಅಂತಹ ಮೌಲ್ಯ
ಗಳನ್ನು ಹುಡುಕಲು ಸಮುದಾಯಿಕ ಪರಿಶ್ರಮ ಅಪೇಕ್ಷಣೀಯ
ವಾಗಿದೆ. ಈ ದಿಶೆಯಲ್ಲಿ ಶಿಕ್ಷಣದ ಕೊಡುಗೆಯೂ ಅತ್ಯಂತ
ಪ್ರಮುಖವಾದದ್ದಾಗಿದೆ.

೩) ಶಾಲೆಗಳು ನೈತಿಕ ಶಿಕ್ಷಣ ಕ್ಷೇತ್ರದಲ್ಲಿ ಏನನ್ನು ಮಾಡ
ದಿದ್ದರೂ, ಅವುಗಳು ಮೌಲ್ಯಗಳ ಪ್ರಜ್ಞೆಯನ್ನು ಮಕ್ಕಳಲ್ಲಿ ಬೇರೂ
ರಿಸುತ್ತವೆ. ಪಠ್ಯಕ್ರಮ ಮತ್ತು ಪಠ್ಯ ಪುಸ್ತಕಗಳಲ್ಲಿ ಕೆಲವು ಮೌಲ್ಯ
ಗಳನ್ನು ಅರಿಸಿಕೊಳ್ಳುವ ಅವಕಾಶ ಶಾಲೆಗಳಿಗೆ ಇದೆ. ನಮ್ಮ
ಶಾಲೆಗಳ ಪರಿಸರವು ಕೆಲವು ವಿದ್ಯಾರ್ಥಿಗಳಲ್ಲಿ ಸಹಕಾರ ಮನೋ
ಭಾವವನ್ನು ಬೆಳೆಸುತ್ತವೆ. ಮತ್ತೆ ಕೆಲವರಲ್ಲಿ ತೀವ್ರ ಸ್ಪರ್ಧಾ
ಮನೋಭಾವವನ್ನೂ ಕೂಡ ಬೆಳೆಸುತ್ತವೆ. ನಮ್ಮ ದೋಷ
ಪೂರಿತ ಪರೀಕ್ಷಾ ವ್ಯವಸ್ಥೆಯಿಂದಾಗಿ ಬಹಳಷ್ಟು ಸಂಖ್ಯೆಯಲ್ಲಿ
ವಿದ್ಯಾರ್ಥಿಗಳು ನಕಲು ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳು
ವಂತೆ ಮಾಡಿದೆ. ಶಾಲಾ ಪರಿಸರದಿಂದ ಮಕ್ಕಳು ಕೆಲವು ಮೌಲ್ಯ
ಗಳನ್ನು ಬೆಳೆಸಿಕೊಳ್ಳುವುದರಿಂದ ನಮ್ಮ ಶಿಕ್ಷಣ ವ್ಯವಸ್ಥೆಯನ್ನು
ಸರಿಯಾದ ಮೌಲ್ಯಗಳನ್ನು ಮಕ್ಕಳು ಬೆಳೆಸಿಕೊಳ್ಳುವಂತೆ ಮಾಡುವ
ದೃಷ್ಟಿಯಿಂದ ಹೆಚ್ಚು ಸೌಹಾರ್ದಯುತವಾಗಿ ಮಾಡಲು ಪರಿಶ್ರ
ಮಿಸುವುದು ಅತ್ಯಂತ ಅವಶ್ಯಕವಾಗಿದೆ.

೪) ಮುಂಬರುವ ದಿನಗಳಲ್ಲಿ ಜೀವನವು ಅತ್ಯಂತ ಸಂಘ
ಹಾಗೂ ಸಂಕೀರ್ಣವಾಗುವುದು. ಕುಟುಂಬ, ಸಮಾಜವ್ಯಕ್ತಿ

ಹಾಗೂ ರಾಜಕೀಯ ಕ್ಷೇತ್ರಗಳ ಪರಿಸರವು ಸತತವಾಗಿ ಹೆಚ್ಚು-ಹೆಚ್ಚು ಸಂಕೀರ್ಣವಾಗುವುದು. ಮುಂಬರುವ ದಿನಗಳಲ್ಲಿ ಇಂದಿನ ವಿದ್ಯಾರ್ಥಿಗಳು ಬೇರೆಯವರ ನಿರ್ಧಾರಗಳ ಮೇಲೆ ಅವಲಂಬಿಸುವ ಬದಲಾಗಿ ತಾವೇ ನಿರ್ಧಾರಗಳನ್ನು ತೆಗೆದುಕೊಳ್ಳವಂತೆ ನೈತಿಕ ಪರಿಸ್ಥಿತಿಯನ್ನು ಎದುರಿಸಬೇಕಾಗುವುದು. ಆದ್ದರಿಂದ ಈ ದೃಷ್ಟಿಯನ್ನಿಟ್ಟುಕೊಂಡು ವಿದ್ಯಾರ್ಥಿಗಳು ತಾವೇ ಯೋಚಿಸಿ ನೈತಿಕ ನಿರ್ಧಾರಗಳನ್ನು ತೆಗೆದು ಕೊಳ್ಳುವುದು ಅತ್ಯಂತ ಅವಶ್ಯಕವಾಗಿದೆ.

೫) ಪ್ರಸ್ತುತ ದಿನಗಳಲ್ಲಿ ಯುವಕರು ಕೆಲವು ವಿಶೇಷ ಸಮಸ್ಯೆಗಳನ್ನು ಹೊಂದಿದ್ದಾರೆ. ಅವರುಗಳು ತಮ್ಮ ಹಿರಿಯರ ಅದರಲ್ಲೂ ವಿಶೇಷವಾಗಿ ರಾಜಕೀಯ ಮುಖಂಡರುಗಳ ಶೀಲವನ್ನು ಪ್ರಶ್ನಿಸಲು ಪ್ರಾರಂಭಿಸಿದ್ದಾರೆ. ಅವರುಗಳು ತಮ್ಮ ಪಠ್ಯಪುಸ್ತಕಗಳಲ್ಲಿ ಕೊಟ್ಟಿರುವ ಮೌಲ್ಯಗಳ ಸಮಂಜಸತೆಯನ್ನು ಕಾಣದಾಗಿದ್ದಾರೆ. ಹಲವು ಯುವಕರು ಧೂಮಪಾನ, ಕುಡಿಯುವುದು. ಮಾದಕವಸ್ತುಗಳ ಸೇವನೆ ಮುಂತಾದ ಚಟಗಳಿಗೆ ಬಲಿಯಾಗಿದ್ದಾರೆ. ಆದ್ದರಿಂದ ಅವರ ಸಮಸ್ಯೆಗಳನ್ನು ಸಂಪೂರ್ಣವಾಗಿ ಚರ್ಚಿಸಿ, ಅವರು ಸರಿಯಾದ ಜೀವನ ವಿಧಾನವನ್ನು ಅಳವಡಿಸಿಕೊಳ್ಳಲು ಸಹಾಯ ಮಾಡುವುದು ಅತ್ಯಂತ ಅವಶ್ಯಕವಾಗಿದೆ.

# ೪. ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಮೌಲ್ಯ ಶಿಕ್ಷಣ

ಮೌಲ್ಯ ಶಿಕ್ಷಣದ ಅವಶ್ಯಕತೆಯನ್ನು ಗಮನದಲ್ಲಿಟ್ಟುಕೊಂಡು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ (NPE) ಮೌಲ್ಯ ಶಿಕ್ಷಣದ ಬಗ್ಗೆ ಈ ಕೆಳಗಿನ ವಿಷಯಗಳನ್ನು ಹೇಳಲಾಗಿದೆ.

೧) ಅತ್ಯಾವಶ್ಯಕ ಮೌಲ್ಯಗಳ ಅಧಃಪತನ, ಸಮಾಜದಲ್ಲಿ ಹೆಚ್ಚುತ್ತಿರುವ ಸರ್ವ ರೀತಿಯ ತಿರಸ್ಕಾರ ಮನೋಭಾವ ಇವುಗಳು ಹೆಚ್ಚು ಆತಂಕಕಾರಿಯಾಗಿದ್ದು, ಶಿಕ್ಷಣವನ್ನು ಸಾಮಾಜಿಕ ಮತ್ತು ನೈತಿಕ ಮೌಲ್ಯಗಳನ್ನು ಬೆಳೆಸಲು ಒಂದು ಪ್ರಭಾವಪೂರ್ಣ ಸಾಧನವನ್ನಾಗಿ ಮಾಡುವ ದೃಷ್ಟಿಯಿಂದ ಪಠ್ಯಕ್ರಮದಲ್ಲಿ ಹೊಂದಾಣಿಕೆಗಳನ್ನು ಮಾಡುವ ಅವಶ್ಯಕತೆಯ ಕಡೆಗೆ ಹೆಚ್ಚು ಗಮನಹರಿಸಬೇಕಾಗಿದೆ.

೨) ಸಾಂಸ್ಕೃತಿಕವಾಗಿ ವೈವಿಧ್ಯತೆಯನ್ನು ಹೊಂದಿರುವ ನಮ್ಮ ಸಮಾಜದಲ್ಲಿ ಶಿಕ್ಷಣವು ಐಕ್ಯತೆ ಮತ್ತು ಭಾವೈಕ್ಯತೆಯನ್ನು ಸಾಧಿಸುವಂತಹ ಸಾರ್ವತ್ರಿಕ ಮತ್ತು ನಿರಂತರ ಮೌಲ್ಯಗಳನ್ನು ನಮ್ಮ ಜನರಲ್ಲಿ ಬೆಳೆಸಲು ಪ್ರಯತ್ನಿಸಬೇಕು. ಅಂತಹ ಮೌಲ್ಯ ಶಿಕ್ಷಣವು ಸುಧಾರಣಾ ವಿರೋಧಿ ಮನೋಭಾವ, ಧಾರ್ಮಿಕ ಅಂಧ-ಶ್ರದ್ಧೆ, ಹಿಂಸೆ, ಮೂಢನಂಬಿಕೆ ಮತ್ತು ಅದೃಷ್ಟವಾದ ಇವುಗಳನ್ನು ತೊಡೆದುಹಾಕಲು ಸಹಾಯ ಮಾಡಬೇಕು.

೩) ಈ ಎಲ್ಲ ಹೋರಾಟದ ಜೊತೆಗೆ ಮೌಲ್ಯ ಶಿಕ್ಷಣವು ನಮ್ಮ ಪರಂಪರೆ. ರಾಷ್ಟ್ರೀಯ ಗುರಿಗಳು. ಸಾರ್ವತ್ರಿಕ ದೃಷ್ಟಿ ಇವುಗಳ ಮೇಲೆ ಆಧಾರಿತವಾಗಿರುವ ಅಪ್ರತಿಮ ಧನಾತ್ಮಕ ಅಂಶಗಳನ್ನು ಒಳಗೊಂಡಿದೆ. ಮೌಲ್ಯ ಶಿಕ್ಷಣವು ಈ ಸ್ವರೂಪಕ್ಕೆ ಪ್ರಾಥಮಿಕ ಪ್ರಾಮುಖ್ಯತೆಯನ್ನು ನೀಡಬೇಕು.

ಹೊಸ ಶಿಕ್ಷಣ ನೀತಿಯನ್ನು ಅನುಷ್ಠಾನಕ್ಕೆ ತರುವಾಗ ಮೌಲ್ಯ ಶಿಕ್ಷಣ ಅಥವಾ ನೈತಿಕ ಶಿಕ್ಷಣಕ್ಕೆ ಪ್ರಮುಖ ಸ್ಥಾನ ನೀಡಬೇಕಾದದ್ದು ಅತ್ಯಂತ ಸುಸ್ಪಷ್ಟ. ಹಿಂದೆ ನೀತಿ ಶಿಕ್ಷಣಕ್ಕೆ ಬೇರೆ ಬೇರೆ ಪಾತ್ರಗಳನ್ನು ಕೊಡಲಾಗಿತ್ತು. ಕೆಲವೊಮ್ಮೆ ಸ್ವತಂತ್ರ ವಿಷಯವಾಗಿಯೂ ಮತ್ತೆ ಕೆಲವೊಮ್ಮೆ ಪೌರನೀತಿಯಂತಹ ಇತರ ವಿಷಯಗಳ ಒಂದು ಭಾಗವಾಗಿಯೂ ಕಲಿಸಲಾಗುತ್ತಿತ್ತು. ಆದರೆ ಮಕ್ಕಳಲ್ಲಿ ನೈತಿಕ ಮನೋಭಾವವನ್ನು ಬೇರೂರಿಸುವಲ್ಲಿ ಇದು ಹೆಚ್ಚು ಸಹಾಯ ಮಾಡಲಿಲ್ಲ. ಇದಕ್ಕೆ ಕಾರಣಗಳೂ ಇವೆ. ಒಂದು ಹೊಸ ವಿಷಯವನ್ನು ಶಾಲೆಗಳಲ್ಲಿ ಅಳವಡಿಸಿದಾಗ ಅದು ಔಪಚಾರಿಕ ಶಿಕ್ಷಣದ ಹಾಗೂ ಪರೀಕ್ಷೆಯ ಒಂದು ಭಾಗವಾಗುತ್ತದೆ. ನೈತಿಕ ಶಿಕ್ಷಣಕ್ಕಾಗಿ ಪ್ರತ್ಯೇಕ ಪಠ್ಯ ಪುಸ್ತಕಗಳನ್ನು ಗೊತ್ತುಪಡಿಸಿದರೆ ಪರೀಕ್ಷೆಗಳನ್ನು ನಡೆಸಬೇಕಾಗುತ್ತದೆ. ಮಕ್ಕಳು ಇಂತಹ ಪರೀಕ್ಷೆಗಳಲ್ಲಿ ಕದ್ದು ಬರೆಯುತ್ತಾರೆ. ಹೀಗಾಗಿ ನೈತಿಕ ಶಿಕ್ಷಣವನ್ನು ಶಾಲೆಗಳ ಪಠ್ಯಕ್ರಮದಲ್ಲಿ ಅಳವಡಿಸುವುದರ ಉದ್ದೇಶವು ಸಂಪೂರ್ಣವಾಗಿ ವಿಫಲವಾಗಿದೆ. ಬಹಳಷ್ಟು ಸಂದರ್ಭಗಳಲ್ಲಿ ನೈತಿಕ ಶಿಕ್ಷಣವು ಅನೈತಿಕ ರೂಪತಾಳುತ್ತದೆ. ಆದ್ದರಿಂದ ಪಠ್ಯ ಹಾಗೂ ಪಠ್ಯೇತರ ವಿಷಯಗಳ ಮೂಲಕ ನೈತಿಕ ಶಿಕ್ಷಣ ಕೊಡಲು ನಿರ್ಧರಿಸಲಾಗಿದೆ.

# ೫. ಮೌಲ್ಯ ಶಿಕ್ಷಣದ ಸಾಮಾನ್ಯ ಉದ್ದೇಶಗಳು

ಸಾಮಾನ್ಯವಾಗಿ ಮೌಲ್ಯ ಶಿಕ್ಷಣವು ಶಾಲೆಗಳಲ್ಲಿ ಬೋಧಿಸುವ ವಿಷಯವಾಗಿದ್ದು. ಇತರ ವಿಷಯಗಳಂತೆ ನಿರ್ದಿಷ್ಟವಾಗಿ ಬೋಧಿಸುವುದಲ್ಲ. ವಿಷಯಗಳ ಬೋಧನೆ ಹಾಗೂ ಇತರ ಚಟುವಟಿಕೆಗಳ ಮೂಲಕ ಮೌಲ್ಯಗಳನ್ನು ಬೋಧಿಸಬೇಕಾಗುವುದು. ಇದರ ಮುಖ್ಯ ಉದ್ದೇಶವು ಮಕ್ಕಳು ದೇಶದ ಉತ್ತಮ ಶೀಲ ಹಾಗೂ ಚಾರಿತ್ರ್ಯವನ್ನು ಹೊಂದಿದ ಸತ್ಪ್ರಜೆಗಳಾಗಲು ಪೋಷಕವಾಗುವಂತಹ ನೈತಿಕ ಜೀವನದ ಗುಣಗಳನ್ನು ಅವರಲ್ಲಿ ಬೇರೂರುವಂತೆ ಮಾಡುವುದಾಗಿದೆ. ಇದಕ್ಕೆ ಸಂಬಂಧಿಸಿದ ಕೆಲವು ಉದ್ದೇಶಗಳು ಈ ಕೆಳಗಿನಂತಿವೆ.

೧) ವಿದ್ಯಾರ್ಥಿಗಳಲ್ಲಿ ಮಾನವೀಯ ಗುಣಗಳನ್ನು ಬೆಳೆಸುವುದು. ಕೆಲವು ಪ್ರಮುಖ ಗುಣಗಳು ಈ ರೀತಿಯಾಗಿವೆ. ಸ್ವಚ್ಛತೆ, ಸತ್ಯ, ಅಹಿಂಸೆ, ಶ್ರಮದುಡಿಮೆ, ಪ್ರೀತಿ ಮತ್ತು ಅನುಕಂಪ, ಸಮಾನತೆ, ಸಮಾಜವಾದ, ಜಾತ್ಯಾತೀತತೆ ಮತ್ತು ಪ್ರಜಾಪ್ರಭುತ್ವ, ಸಹಕಾರ, ನ್ಯಾಯ, ಧೈರ್ಯ, ವೈಜ್ಞಾನಿಕ ಮನೋಭಾವನೆ, ಪರಿಸರ ಸಂರಕ್ಷಣೆ, ಉತ್ಪಾದನೆ ಮತ್ತು ಮಿತಿಸಂತಾನದ ಮಹತ್ವ.

೨) ವಿದ್ಯಾರ್ಥಿಗಳು ತಮ್ಮ ವೈಯಕ್ತಿಕ ಮತ್ತು ಸಾಮಾಜಿಕ ಜೀವನದಲ್ಲಿ ಪ್ರಗತಿಪರ ಮತ್ತು ಜವಾಬ್ದಾರಿಯುತ ನಾಗರಿಕರಾಗಲು ಪ್ರೋತ್ಸಾಹಿಸುವುದು.

೩) ರಾಷ್ಟ್ರದ ಆರ್ಥಿಕ, ಸಾಮಾಜಿಕ, ಸ್ಥಿತಿಗಳನ್ನು ಮಕ್ಕಳಿಗೆ ತಿಳಿಸಿಕೊಡುವುದು ಮತ್ತು ಅದರ ಸುಧಾರಣೆಗಾಗಿ ಅವರಲ್ಲಿ ಜಾಗೃತಿಯನ್ನು ಮೂಡಿಸುವುದು.

೪) ವಿದ್ಯಾರ್ಥಿಗಳಲ್ಲಿ ವಿಶಾಲ ಮನಸ್ಸನ್ನು ಬೆಳೆಸಿ ಅವರು ಧರ್ಮ, ಭಾಷೆ, ಜಾತಿ ಮತ್ತು ಲಿಂಗಗಳ ಪರಿಧಿಯನ್ನು ಮೆಟ್ಟಿ ನಿಲ್ಲುವಂತೆ ಪ್ರೇರೇಪಿಸುವುದು.

೫) ಮಕ್ಕಳಲ್ಲಿ ಆತ್ಮಗೌರವ ಬೆಳೆಸುವುದು. ಅವರು ಸಾಮಾಜಿಕ ಮತ್ತು ನೈತಿಕ ಮೌಲ್ಯಗಳನ್ನು ಪಡೆಯುವಂತೆ ಹಾಗೂ ಅಂತರ್-ಶಕ್ತಿಗಳು ವಿಕಾಸಗೊಳ್ಳುವಂತೆ ಮಾಡುವುದು.

೬) ಈ ಕೆಳಗಿನವುಗಳ ಬಗ್ಗೆ ಯೋಗ್ಯ ಮನೋಭಾವವನ್ನು ಬೆಳೆಸಿಕೊಳ್ಳಲು ಸಹಾಯ ಮಾಡುವುದು.

ಅ) ತನ್ನ ಬಗ್ಗೆ

ಬ) ಸಮಾಜ ಬಗ್ಗೆ

ಕ) ತನ್ನ ದೇಶದ ಬಗ್ಗೆ

ಡ) ಇತರ ದೇಶಗಳ ಬಗ್ಗೆ

ಇ) ಪರಿಸರದ ಬಗ್ಗೆ

ಈ) ಎಲ್ಲಾ ಮತಗಳ ಬಗ್ಗೆ

೭) ಮಕ್ಕಳು ಸ್ವಯಂ ನಿರ್ಧಾರಗಳನ್ನು ಕೈಕೊಂಡು ಸ್ವಾವಲಂಬಿಗಳಾಗಿ ಬದುಕುವುದನ್ನು ಕಲಿಸುವುದು.

೮) ಯಾವುದು ಸರಿ ಯಾವುದು ತಪ್ಪೆಂದು ನಿರ್ಧರಿಸುವ ಮನೋಬಲವನ್ನು ಬೆಳೆಸುವುದು.

೯) ಆಧುನೀಕರಣದಿಂದ ಬೆಳೆದು ಬರುತ್ತಿರುವ ಹೊಸ ಹೊಸ ಮೌಲ್ಯಗಳನ್ನು ಅಭಿವೃದ್ಧಿ ಪಡಿಸುವುದು.

೧೦) ಮೌಲ್ಯಗಳಿಂದ ಉತ್ತಮ ಜೀವನದ ಮಾರ್ಗಗಳನ್ನು ತಿಳಿಸುವುದು.

## ೬. ಮೌಲ್ಯಗಳಿಗೆ ಹಾಗೂ ಶಿಕ್ಷಣಕ್ಕಿರುವ ಸಂಬಂಧ

ಶೀಲ ಸಂವರ್ಧನೆಯೇ ಶಿಕ್ಷಣದ ಮುಖ್ಯ ಗುರಿ. ಈ ದಿಶೆಯಲ್ಲಿ ಶಿಕ್ಷಣದ ಮೂಲಕ ಉತ್ತಮ ಮೌಲ್ಯಗಳನ್ನು ಬೋಧಿ ಸಬೇಕು. ಮಕ್ಕಳು ಮಾನವೀಯ ಗುಣಗಳನ್ನು ಪಡೆಯಬೇಕು ಉತ್ತಮ ನಾಗರಿಕರಾಗಬೇಕು, ಶಿಕ್ಷಣ ಆ ಕಾರ್ಯ ಮಾಡಬೇಕು ಮಕ್ಕಳಲ್ಲಿಯ ದುಷ್ಟ ಪ್ರವೃತ್ತಿಗಳನ್ನು ನೀಗಿಸಿ, ಮಾನವತೆಯನ

ಸಿ. ಅವರನ್ನು ಔದಾರ್ಯ, ಸಹಾನುಭೂತಿಗಳಂತಹ ಆಧ್ಯಾತ್ಮಿಕ ಮೌಲ್ಯಗಳಿಂದ ದಿವ್ಯತೆಯ ಕಡೆಗೆ ಕರೆದೊಯ್ಯಬೇಕು. ಇದು ಜವಾದ ಶಿಕ್ಷಣ. ಇಂದಿನ ಶಿಕ್ಷಣ ಹಾಗೆ ಮಾಡುತ್ತಿಲ್ಲ. ಬುದ್ಧಿ ಲಿತಿರಬಹುದು ಆದರೆ ಹೃದಯ ಹದಗೊಳ್ಳಲಿಲ್ಲ. ಇಂದಿನ ಶಿಕ್ಷಿತರನೇಕರಲ್ಲಿ ಸ್ವಾರ್ಥ, ಸಂಕುಚಿತ ಮನೋಭಾವನೆ, ಅಹಂ-ಕಾರ, ದ್ವೇಷ, ಅಸೂಯೆಗಳು ತಾಂಡವವಾಡುತ್ತಿವೆ. ಬಡವರನ್ನು, ಅಜ್ಞಾನಿಗಳನ್ನು ಅನುಕಂಪದಿಂದ ಕಾಣುವ ಹೃದಯ ವಂತಿಕೆ ಇರದೆ ಶೋಕಿಗಳಿಗೆ ಮನಸೆಳೆಸುತ್ತಾರೆ. ಇದಕ್ಕೆಲ್ಲ ಕಾರಣ ರಿಯಾದ ಶಿಕ್ಷಣದ ಅಭಾವ, ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯ ಳ ಕೊರತೆ. ಇದನ್ನು J. J. ರೂಸೋ ಬಹಳ ಮಾರ್ಮಿಕವಾಗಿ ಹೇಳಿದ್ದಾನೆ.

"ಶಿಕ್ಷಣದ ಗುರಿ ಯೋಧನನ್ನಾಗಲಿ,
ನ್ಯಾಯಾಧೀಶನನ್ನಾಗಲಿ, ಆಡಳಿತಗಾರನನ್ನಾಗಲಿ,
ಪುರೋಹಿತನನ್ನಾಗಲಿ ನಿರ್ಮಿಸುವುದಾಗಿರದೆ
ಮಾನವನನ್ನು ನಿರ್ಮಿಸುವುದಾಗಿದೆ".

ಶಿಕ್ಷಣ ಕೇವಲ ಓದು-ಬರಹ ಕಲಿಯುವುದಲ್ಲ. ಸ್ವಾವ-ಲಂಬನೆ, ಶೀಲವಂತ, ವಿದ್ಯಾವಂತ ಮಾನವೀಯ ಮೌಲ್ಯಗಳಿಂದ ದನಾದ ಹೃದಯವಂತ ಮಾನವರನ್ನು ನಿರ್ಮಿಸುವುದಾಗಿದೆ. ಈ ಧ್ಯೇಯೋದ್ದೇಶಗಳನ್ನು ಕಾರ್ಯಗತಗೊಳಿಸಬಲ್ಲ ನಿಜವಾದ ಕ್ಷಣ ನಮಗಿಂದು ಬೇಕಾಗಿದೆ. ಆದ್ದರಿಂದ ಡಾ. ರಾಧಾಕೃಷ್ಣನ್ ರವರು ಹೀಗೆ ಹೇಳಿದ್ದಾರೆ.

"ಮಾನವ ಮೀನಿನಂತೆ ನೀರಿನಲ್ಲಿ ಈಜುವುದನ್ನು ಕಲಿತ.
ಪಕ್ಕಿಯಂತೆ ಬಾನಿನಲ್ಲಿ ಹಾರಾಡುವುದನ್ನು ಕಲಿತ.
ಆದರೆ ಮಾನವ ಮಾನವನಂತೆ ಬದುಕುವುದನ್ನು ಮಾತ್ರ
ಕಲಿಯಲಿಲ್ಲ"

ಮನುಷ್ಯನಿಗೆ ಬೇಕಾದುದು ಕೇವಲ ಆಹಾರವಲ್ಲ. ಏಕೆಂದರೆ ಮನುಷ್ಯ ಬರೀ ದೇಹವನ್ನಷ್ಟೇ ಪಡೆದಿಲ್ಲ. ಆತನಿಗೆ ಆತ್ಮವೂ ಇದೆ. ದೇಹಕ್ಕೆ ಹಸಿವು ಇರುವಂತೆ ಆತ್ಮಕ್ಕೂ ಆಧ್ಯಾತ್ಮದ ಹಸಿವು ಇದೆ. ದೇಹಕ್ಕೆ ತಿನ್ನಲು ಅನ್ನಬೇಕು. ಅದರಂತೆ ಆತ್ಮದ ಹಸಿವಿಗೆ ಶಾಂತಿ, ಪ್ರೀತಿ ಹಾಗೂ ಸಹಾನುಭೂತಿ, ಧರ್ಮ ಮತ್ತು ನೀತಿ ಬೇಕು.

ಪ್ರಾಚೀನ ಕಾಲದಲ್ಲಿ ಭಾರತ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಶಿಕ್ಷಣ ಗುರುಕುಲಗಳಲ್ಲಿ, ಮಠ-ಮಂದಿರ ವಿಹಾರಗಳಲ್ಲಿ, ಚರ್ಚು-ಮಸೀದೆಗಳಲ್ಲಿ ಅಂದರೆ ಧಾರ್ಮಿಕ ಪರಿಸರದಲ್ಲಿ ನಡೆಯುತ್ತಿತ್ತು. ಆಗ ಅದು ಆಧ್ಯಾತ್ಮಿಕ ತಳಹದಿಯನ್ನು ಹೊಂದಿತ್ತು. ಆದರೆ ಮುಂದೆ ಶಿಕ್ಷಣಕ್ಕೂ ಧರ್ಮಕ್ಕೂ ಸಂಬಂಧ ಕಳಚಿ ಹೋಗಿ ನೀತಿಯು ನೆಲೆಗಟ್ಟೇ ಕುಸಿಯಿತು. ಇದನ್ನು Duke of Wellington ಹೀಗೆ ಹೇಳಿದ್ದಾರೆ.

"Divorce religion from Education and all you will produce will be a race of clever devils."

ಅಂದರೆ, ಧರ್ಮವನ್ನು ಶಿಕ್ಷಣದಿಂದ ಬೇರ್ಪಡಿಸಿದರೆ ಅಂಥ ಶಿಕ್ಷಣ ಕೇವಲ ಬುದ್ಧಿವಂತ ಪಿಶಾಚಿ ವರ್ಗವನ್ನೇ ನಿರ್ಮಿಸುವಂತಾಗುವುದು.

ಇಂದು ನಾವು ವೈಜ್ಞಾನಿಕವಾಗಿ ಹಾಗೂ ತಾಂತ್ರಿಕವಾಗಿ ಸಾಕಷ್ಟು ಪ್ರಗತಿ ಹೊಂದಿದ್ದೇವೆ. ಆದರೆ ಉತ್ತಮ ಜೀವನ ನಡೆಸುವಲ್ಲಿ ವಿಫಲರಾಗಿದ್ದೇವೆ. ಪ್ರಾಚೀನ ಹಾಗೂ ಆಧುನಿಕ ಜೀವನಕ್ಕೆ ಹೋಲಿಸಿದಾಗ ವಿಚಿತ್ರ ಜೀವನ ಕ್ರಮವನ್ನು ಕಾಣುತ್ತ ಲಿದ್ದೇವೆ. ಅಂದರೆ ಪ್ರತಿಯೊಬ್ಬರಲ್ಲಿಯೂ ಮೌಲ್ಯಗಳು ಇಲ್ಲ ದಾಗಿ, ಗಳಿಕೆಯ ಬೆನ್ನುಹತ್ತಿ ಕೃತಕ ಜೀವನದ ಮಾರ್ಗವನ್ನು ಅನುಸರಿಸುತ್ತಿದ್ದಾರೆ. ಇದಕ್ಕೆ ಆಂಗ್ಲ ಇತಿಹಾಸಕಾರ Toyubee ಹೀಗೆ ಹೇಳಿದ್ದಾರೆ.

> "We have become Gods in Technology and apes in life."

ಅಂದರೆ ವೈಜ್ಞಾನಿಕ ಕ್ರಾಂತಿ ಹಾಗೂ ತಾಂತ್ರಿಕ ಜ್ಞಾನದ ಪ್ರಗತಿ ಯಿಂದಾಗಿ ನಾವು ಸರ್ವ ಸಮರ್ಥ ದೇವರೇ ಆಗಿದ್ದರೂ ವಾಸ್ತವಿಕ ಜೀವನದಲ್ಲಿ ವಾನರರಾಗಿದ್ದೇವೆ ಮತ್ತು ದಾನವರಾಗಿದ್ದೇವೆ.

ಇದನ್ನೇ ಕಾವ್ಯಾನಂದರು ಹೀಗೆ ಹೇಳುವರು.

"ವಾನರನು ನರನಾದ ಉತ್ಕ್ರಾಂತಿಯಲ್ಲಿ  
ನರನು ವಾನರನಾದ ನವಕ್ರಾಂತಿಯಲ್ಲಿ  
ಸಕಲ ಸಂಪದ ಬಂತು ಶಾಂತಿ ಎಲ್ಲಿ?  
ಜೀವನ ಸಾಗಿಹುದು ಬರೀ ಭ್ರಾಂತಿಯಲ್ಲಿ."

ಭೌತಿಕ ಸಂಪತ್ತಿನಿಂದ ಮದವೇರಿದ ಮಾನವ, ಮಾನವೀಯತೆಯೊಡನೆ ಇಂದು ಕುಚೇಷ್ಟೆಯಲ್ಲಿ ತೊಡಗಿದ್ದಾನೆ. ಮಾನವಕುಲದ ನಾಶಕ್ಕಾಗಿ ತನ್ನನ್ನೇ ತಾನು ಮಾರಿಕೊಂಡಿದ್ದಾನೆ.

ಇದರಂತೆ ಮಹಾತ್ಮಾ ಗಾಂಧೀಜಿಯವರು ಸಪ್ತ ಪಾತಕಗಳನ್ನು ಹೇಳಿದರು. ಅವುಗಳಲ್ಲಿ 'ಶೀಲವಿಲ್ಲದ ಶಿಕ್ಷಣ ಶಿಕ್ಷಣವೆನಿಸದು' ಎಂದಿದ್ದಾರೆ. ಅದರಂತೆ ಇನ್ನುಳಿದ ಕ್ಷೇತ್ರಗಳಿಗೂ ಸಂಬಂಧಿಸಿದ ಅಂಶಗಳಿವೆ.

೧. ತತ್ವರಹಿತ ರಾಜಕೀಯ
೨. ದುಡಿಮೆ ಇಲ್ಲದ ಸಂಪತ್ತು
೩. ಪ್ರಜ್ಞೆಯಿಲ್ಲದ ಸಂತೋಷ
೪. ಶೀಲವಿಲ್ಲದ ಶಿಕ್ಷಣ
೫. ನೀತಿಯಿಲ್ಲದ ವ್ಯವಹಾರ
೬. ಮಾನವೀಯತೆ ಇಲ್ಲದ ವಿಜ್ಞಾನ
೭. ತ್ಯಾಗವಿಲ್ಲದ ಪೂಜೆ

ಆದರೆ ಐಹಿಕ ಸುಖವನ್ನೇ ಅರಸುತ್ತ ನಡೆದ ಜನರು ಕೆಟ್ಟ ಹಾಗೂ ಭ್ರಷ್ಟ ಮಾರ್ಗಗಳನ್ನೇ ಇಂದು ಅನುಸರಿಸುತ್ತಿದ್ದಾರೆ. ಇದನ್ನು ಹೋಗಲಾಡಿಸಲು ಶಿಕ್ಷಣದಲ್ಲಿ ಹೊಸತನ್ನು ತರಬೇಕಾಗಿದೆ. ಆದ್ದರಿಂದ ಸಾರ್ವತ್ರಿಕ ಹಾಗೂ ಶಾಶ್ವತ ಮೌಲ್ಯಗಳನ್ನು ಶಿಕ್ಷಣದಲ್ಲಿ ಅಳವಡಿಸಬೇಕು.

ಮೌಲ್ಯಗಳನ್ನು ಮುಖ್ಯವಾಗಿ ೩ ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳು ಇಂತಿವೆ.

## ಅ) ವೈಯಕ್ತಿಕ ಮೌಲ್ಯಗಳು

೧. ಸ್ವಚ್ಛತೆ
೨. ಕೆಲಸದ ಬಗ್ಗೆ ಗೌರವ
೩. ಪರಿಶ್ರಮ
೪. ನಿಯಮಿತತನ
೫. ಪ್ರಾಮಾಣಿಕತೆ
೬ ನಿಸರ್ಗ ಮೆಚ್ಚುಗೆ
೭ ದೃಢತೆ
೮ ಧೈರ್ಯ
೯ ಭರವಸೆ
೧೦ ಮಹತ್ವಾಕಾಂಕ್ಷೆ

## ಬ) ಸಮುದಾಯ ಮೌಲ್ಯಗಳು

೧. ಪ್ರೀತಿ
೨. ಸಹೋದರತ್ವ
೩. ಕ್ಷಮತೆ
೪. ಪಶ್ಚಾತ್ತಾಪ
೫. ಒಗ್ಗಟ್ಟು
೬. ಸೇವೆ
೭. ಗುಂಪಿನ ಶಕ್ತಿ
೮. ಜವಾಬ್ದಾರಿ
೯. ಕರುಣೆ
೧೦. ನ್ಯಾಯ

**ಆ) ನೆರೆಹೊರೆಯ ಮೌಲ್ಯಗಳು**

೧. ಕರ್ತವ್ಯ
೨. ತಾಳ್ಮೆ
೩. ನಡತೆ
೪. ಮಿತವ್ಯಯ
೫. ಔದಾರ್ಯ
೬. ಸ್ಫೂರ್ತಿ
೭. ನಿಷ್ಠೆ
೮. ಕೃತಜ್ಞತೆ
೯. ಸ್ವಾತಂತ್ರ್ಯ
೧೦. ಸಂಕಲ್ಪ

ಸಾಮಾನ್ಯವಾಗಿ ಶಿಕ್ಷಣವೆಂದರೆ 'ವಿದ್ಯೆ' ಅಥವಾ 'ಜ್ಞಾನ ಸಂಪಾದನೆ' ಎಂದು ಕರೆಯುತ್ತಾರೆ. ಶಿಕ್ಷಣ ಎನ್ನುವ ಶಬ್ದವು ಸಂಸ್ಕೃತ ಭಾಷೆಯ 'ಶಿಕ್ಷಾ' ಎಂಬ ಶಬ್ದದಿಂದ ಬಂದಿದೆ. 'ಶಿಕ್ಷಾ' ಎಂದರೆ ನಿಯಂತ್ರಿಸು ಅಥವಾ ಕಲಿಸು ಎಂದರ್ಥ.

ಇದರಂತೆ ಇಂಗ್ಲೀಷ್ ಭಾಷೆಯ 'Education' ಎಂಬ ಶಬ್ದವನ್ನು ಶಿಕ್ಷಣ ಎಂಬ ಶಬ್ದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಈ ಶಬ್ದವು ಲ್ಯಾಟಿನ್ ಭಾಷೆಯ 'Educare' ಮತ್ತು 'Educere' ಎಂಬ ಶಬ್ದಗಳಿಂದ ಬಂದಿದೆ.

Educare = to bring up, to nurish, to raise ಎಂದರ್ಥ. ಅಂದರೆ 'ಬೆಳೆಸು' ಎಂದಾಗುತ್ತದೆ. ಮತ್ತು

Educere – to bring forth, to lead out, to draw out ಎಂದರ್ಥ. ಅಂದರೆ, 'ದಾರಿತೋರಿಸು' ಎಂದಾಗುತ್ತದೆ.

ಆದ್ದರಿಂದ ಶಿಕ್ಷಣ ಎಂದರೆ, ವ್ಯಕ್ತಿಯನ್ನು ಸುಸಂಸ್ಕೃತನನ್ನಾಗಿ ಮಾಡು ಅಥವಾ ಸನ್ಮಾರ್ಗ ತೋರಿಸು ಎಂದು ಅರ್ಥೈಸಬಹುದು. ಎರಡನೆಯದಾಗಿ, ಶಿಕ್ಷಣ ಎಂದರೇನು ? ಎಂಬುದನ್ನು ತಿಳಿಯೋಣ. ಶಿಕ್ಷಣದ ಕಲ್ಪನೆಯು ಕಾಲಕಾಲಕ್ಕೆ ಬದಲಾದ ಅರ್ಥವನ್ನು ಹೊಂದಿರುವುದು. ಅನೇಕ ಶಿಕ್ಷಣ ತಜ್ಞರು ತಮ್ಮ ಜೀವನ ದೃಷ್ಟಿ ಹಾಗೂ ತತ್ವಗಳ ಆಧಾರದ ಮೇಲೆ ಅನೇಕ ವ್ಯಾಖ್ಯೆಗಳನ್ನು ಕೊಟ್ಟಿರುವರು. ಅವುಗಳಲ್ಲಿ ನೈತಿಕ ಶಿಕ್ಷಣಕ್ಕೆ ಅನ್ವಯಿಸಿ ಇರುವ ವ್ಯಾಖ್ಯೆಗಳನ್ನು ಇಲ್ಲಿ ನೋಡೋಣ.

೧. "ಶಿಕ್ಷಣವು ಒಂದು ಬಗೆಯ ವಿಧಾನ. ಈ ವಿಧಾನದಿಂದಲೇ ಹಾಗೂ ಈ ವಿಧಾನದಲ್ಲಿಯೇ ಎಳೆಯ ಮಕ್ಕಳ ಜ್ಞಾನ, ಶೀಲ ಹಾಗೂ ವರ್ತನೆಗಳು ಸಾಕಾರಗೊಳ್ಳುವವು. ಆದ್ದರಿಂದ ಮಗುವಿನಲ್ಲಿರುವ ಸುಪ್ತ–ಶಕ್ತಿಗಳನ್ನು ಹಂತಹಂತವಾಗಿ ಪ್ರಕಟಗೊಳಿಸುವುದೇ ಶಿಕ್ಷಣ".

—ಡ್ರೀವರ್

೨. "ವ್ಯಕ್ತಿಯಲ್ಲಿ ಅಡಗಿರುವ ಸಾಮರ್ಥ್ಯಗಳನ್ನು ಕಂಡು ಹಿಡಿದು, ಅವುಗಳನ್ನು ಬೆಳೆಸಿ, ಸಮಾಜದ ಮೂರೂ ವರ್ಗಗಳಿಗೆ ಆತನನ್ನು ಹೊಂದಿಕೊಳ್ಳುವಂತೆ ಮಾಡುವುದೇ ಶಿಕ್ಷಣ".

—ಜಾನ್‌ಡ್ಯೂಯಿ

೩. "ಶಿಕ್ಷಣವು ವ್ಯಕ್ತಿಗಳಿಂದ ಮೊದಲಿಗೆ. ಮೊದಲಿನಿಂದ ಹೃದಯಕ್ಕೆ ತಕ್ಕ ಸಂಸ್ಕಾರವನ್ನುಂಟು ಮಾಡಿ ವ್ಯಕ್ತಿಯ ಸಮತೋಲ ವಿಕಾಸಕ್ಕೆ ನೆರವಾಗಬೇಕು".

—ರೂಸವೆಲ್ಟ್

೪. "ಮಕ್ಕಳು ಮಾನವರಾಗಿ. ನಾಗರಿಕರಾಗಿ. ಇತರರೊಡನೆ ಪ್ರೀತಿ–ಗೌರವ ಘನತೆಗಳಿಂದ ವರ್ತಿಸುವಂತೆ ಮಾಡಿ. ಮಕ್ಕಳಲ್ಲಿ ಔದಾರ್ಯ. ಸೋದರಭಾವನೆ. ಸಹಾನುಭೂತಿ ಬೆಳೆಯುವಂತೆ ಮಾಡುವುದೇ ಶಿಕ್ಷಣ".

—ಡಾ. ರಾಧಾಕೃಷ್ಣನ್

೫. "ಮಗು ಮತ್ತು ವ್ಯಕ್ತಿಯಲ್ಲಿರುವ ಶರೀರ. ಮನಸ್ಸು ಹಾಗೂ ಆತ್ಮದ ಶಕ್ತಿಗಳಲ್ಲಿಯ ಅತ್ಯುತ್ತಮಾಂಶಗಳನ್ನು ಸರ್ವತೋಮುಖವಾಗಿ ಹೊರಗೆಡುವುದೇ ಶಿಕ್ಷಣ".

—ಗಾಂಧೀಜಿ

೬. "ಆತ್ಮಪ್ರಕಾಶ. ಪ್ರೇಮಗಳಿಂದ ಪೂರ ಸಂಪತ್ತನ್ನು ತಂದುಕೊಟ್ಟು ಮಗುವನ್ನು ಸುಂದರ. ಯೋಗ್ಯ ಹಾಗೂ ಸತ್ಯವಂತನನ್ನಾಗಿ ಮಾಡುವುದೇ ಶಿಕ್ಷಣ".

—ರವೀಂದ್ರನಾಥ ಟ್ಯಾಗೋರ

ಹೀಗೆ ಶಿಕ್ಷಣವು ನಿರಂತರವಾಗಿ ನಡೆಯುವ ಕ್ರಿಯೆ. ಮಾನವನ ಹುಟ್ಟಿನಿಂದ ಸಾಯುವವರೆಗೆ ಈ ಕ್ರಿಯೆಯು ನಡೆಯುತ್ತಿರುತ್ತದೆ. ಶಾಲೆ–ಕಾಲೇಜುಗಳಲ್ಲಿ ನಡೆಯುವ ಶಿಕ್ಷಣವೆಂದು ಕರೆಯುವುದು ಅದು ಸೀಮಿತ ಹಾಗೂ ಸಂಕುಚಿತ ಅರ್ಥದಲ್ಲಿ.

ಆದರೆ ವಿಶಾಲ ಅರ್ಥದಲ್ಲಿ, ಶಾಲೆಯನ್ನು ಹೊರತುಪಡಿಸಿ, ಮನೆ, ಮಠ, ರೇಡಿಯೋ, ಸಿನೇಮಾ, ದೂರದರ್ಶನ ಇತ್ಯಾದಿ ಅನೌಪಚಾರಿಕ ಸಂಸ್ಥೆಗಳಿಂದ ಶಿಕ್ಷಣ ಪಡೆಯುವುದನ್ನು ವಿಶಾಲ ಅರ್ಥದಲ್ಲಿ ತಿಳಿಯಲಾಗಿದೆ. 'ಜೀವನವೇ ಶಿಕ್ಷಣ, ಶಿಕ್ಷಣವೇ ಜೀವನ ಎಂದಾಗಿದೆ.

ಆದ್ದರಿಂದ ಶಿಕ್ಷಣದಿಂದಲೇ ಮಾನವನ ಸರ್ವತೋಮುಖ ಅಭಿವೃದ್ಧಿ ಸಾಧ್ಯ. ಶಿಕ್ಷಣದಿಂದಲೇ ಉತ್ತಮ ಗುಣಗಳನ್ನು ಮಕ್ಕಳಿಗೆ ತಿಳಿಸಿ, ಅವುಗಳನ್ನು ಜೀವನದಲ್ಲಿ ಅನುಕರಣೆ ಮಾಡುವಂತೆ ತಿಳಿಸಬೇಕಾಗಿದೆ. ಅದರಿಂದ ಉತ್ತಮ ಸಮಾಜ ಹಾಗೂ ದೇಶವನ್ನು ಕಟ್ಟಬಹುದು. ಆದ್ದರಿಂದ ಜೀವನದ ಮೌಲ್ಯಗಳಿಗೂ ಶಿಕ್ಷಣಕ್ಕೂ ನಿಕಟ ಸಂಬಂಧವಿದೆ ಎಂದು ಹೇಳಬಹುದು. ಉತ್ತಮ ಮೌಲ್ಯಗಳನ್ನು ಶಿಕ್ಷಣ ಬೆಳೆಸಿದರೆ, ಉತ್ತಮ ಜೀವನ ಸಾಧ್ಯ.

## ೭. ಮೌಲ್ಯಗಳ ಬೋಧನೆ

ಶೀಲವು ಹುಟ್ಟು ಗುಣವಲ್ಲ. ಅದು ಪಡೆದ ಗುಣ. ಆದ್ದರಿಂದ ಮೌಲ್ಯಗಳನ್ನು ಬೋಧಿಸಲು ಸಾಧ್ಯವಿದೆ. ಮೌಲ್ಯಗಳನ್ನು ಪಠ್ಯ ವಿಷಯಗಳ ಜೊತೆಗೆ ಸೇರಿಸಿ ವಿದ್ಯಾರ್ಥಿಗಳಿಗೆ ಬೋಧಿಸಬೇಕು. ಈ ಗುರಿಯನ್ನು ಸಾಧಿಸಲು ಶಿಕ್ಷಕನು ವಿದ್ಯಾಪ್ರೇಮಿ, ಶೀಲ ಪ್ರೇಮಿ, ವಿದ್ಯಾರ್ಥಿ ಪ್ರೇಮಿ, ಶುಚಿ ಹಾಗೂ

ಸರಳ ಜೀವಿಯಾಗಿರಬೇಕು. ಸಂಪೂರ್ಣಭಾವದಿಂದ ದುಡಿದು
ಮಕ್ಕಳ ಕಲ್ಯಾಣ ಸಾಧಿಸಬೇಕು. ಆತನ ಜೀವನವೇ ಆದರ್ಶತೆ
ಯಲ್ಲಿ ಅನುಕರಣೀಯವಾಗಿರಬೇಕು. ಮಕ್ಕಳು ಶಿಕ್ಷಕನನ್ನು ಅನು
ಸರಿಸಿ ಮೌಲ್ಯಗಳನ್ನು ಪಡೆಯುವಂತಾಗಬೇಕು. "Character
i caught and not taught" ಎಂಬಂತೆ ವಿದ್ಯಾರ್ಥಿಗಳು
ನೈತಿಕ ಗುಣಗಳನ್ನು ಬಿಟ್ಟು ವ್ಯಕ್ತಿಯನ್ನು, ಆತನ ಆದರ್ಶ ಗುಣ
ವಾಗೂ ಶೀಲಗಳನ್ನು ಅನುಕರಣೆಯಿಂದ ಕಲಿಯಬೇಕು.

ಶಿಕ್ಷಕರು ಇಂತಹ ಪವಿತ್ರ ವೃತ್ತಿಯನ್ನು ಶ್ರದ್ಧೆಯಿಂದ
ನಡೆಸಿ ಮಕ್ಕಳ ಉದ್ಧಾರ ಮಾಡಿ ಕೃತಕೃತ್ಯರೆನಿಸಬೇಕು. ಇದೂ
ವರೆಗೆ ವಿವರಿಸಿದ ಸತ್ಯಸಂಧತೆ. ಪ್ರಾಮಾಣಿಕತೆ. ಸತ್ಯಾನ್ವೇಷಣೆ,
ಸೌಂದರ್ಯೋಪಾಸನೆ, ಅನುಕಂಪ. ಸೇವೆ. ತ್ಯಾಗದಂತಹ ಮಾನ
ವೀಯ ಗುಣಗಳನ್ನು ಮಕ್ಕಳಲ್ಲಿ ಬೆಳೆಸಿ ಬೇರೂರುವಂತೆ ಮಾಡಿ
ಅವರಲ್ಲಿಯ ಪಶುತ್ವವನ್ನು ನಿವಾರಿಸಿ. ಮಾನವತೆಯನ್ನರಳಿಸಿ
ದಿವ್ಯತೆಯೆಡೆಗೆ ಸಾಗುವಂತೆ ಮಾಡುವ ದೊಡ್ಡ ಹೊಣೆ ಶಿಕ್ಷಕರ
ಮೇಲಿದೆ. ಶಿಕ್ಷಣದ ನಿಜವಾದ ಧ್ಯೇಯೋದ್ದೇಶವನ್ನು ಅರಿತು
ಶಿಕ್ಷಕರು ಕಾರ್ಯನಿರ್ವಹಿಸಲೇಬೇಕು.

ಕೇವಲ ಮೌಲ್ಯಗಳ ನೀತಿಯನ್ನೊಳಗೊಂಡ ಕತೆ–ಕವನ
ಗಳನ್ನು ಹೇಳುವುದರಿಂದಾಗಲೀ ಅಂತಹ ವಿಷಯವನ್ನು ಪಾಠದ
ಮೂಲಕ ಕಲಿಸುವುದರಿಂದಾಗಲೀ ಮಕ್ಕಳಲ್ಲಿ ನಿಜವಾದ ನೈತಿಕತೆ
ಯನ್ನು ಮೂಡಿಸಲು ಸಾಧ್ಯವಿಲ್ಲ. ಶಿಕ್ಷಕನ ಪ್ರಭಾವವು ವಿದ್ಯಾರ್ಥಿ
ಗಳ ಮೇಲೆ ಬಹಳಷ್ಟು ಆಗುವುದರಿಂದ ಆತನ ಒಳ್ಳೆಯ ನಡೆ–

ನುಡಿಗಳನ್ನು ಅನುಕರಣೆ ಮಾಡುವರು. ಆತನು ಸತ್ಯವಂತನಾಗಿ ಪ್ರೀತಿ ವಾತ್ಸಲ್ಯದಿಂದ ಮಕ್ಕಳೊಂದಿಗೆ ಸಹಕಾರ ಮನೋಭಾವ ದಿಂದ ವರ್ತಿಸುವುದರಿಂದ ಅನುಕರಣೆ ಮಾಡುವ ಮಕ್ಕಳು ಅಂತಹ ಗುಣಗಳನ್ನೇ ಪಡೆದುಕೊಳ್ಳುವರು. ಇದಲ್ಲದೆ ಪ್ರತ್ಯಕ್ಷ ಹಾಗೂ ಪರೋಕ್ಷ ಪದ್ಧತಿಗಳ ಮೂಲಕ ನೈತಿಕ ಶಿಕ್ಷಣವನ್ನು ನೀಡಲು ಸಾಧ್ಯವಿದೆ. ಪ್ರತ್ಯಕ್ಷ ಪದ್ಧತಿಯಲ್ಲಿ ಕಥೆ ಹೇಳುವುದು, ಆತ್ಮಚರಿತ್ರೆಗಳನ್ನು ಹೇಳುವುದು, ಧರ್ಮದ ಬಗ್ಗೆ ಹೇಳುವುದು, ಮುಂತಾದವುಗಳು. ಪರೋಕ್ಷ ಪದ್ಧತಿಯಲ್ಲಿ ಸಾಮೂಹಿಕ ಪ್ರಾರ್ಥನೆ, ಧ್ಯಾನ, ಪ್ರಮುಖ ದಿನೋತ್ಸವಗಳನ್ನು ಆಚರಿಸುವುದು ಶ್ರಮದಾನ, ಸಾಮುದಾಯಿಕ ಜೀವನ ಮತ್ತು ಆಟ, ಚರ್ಚಾಕೂಟ ಮುಂತಾದವುಗಳ ಮೂಲಕ ಮೌಲ್ಯಗಳನ್ನು ಬೆಳೆಸಲು ಸಾಧ್ಯವಿದೆ.

ಬಾಹ್ಯವಾಗಿರುವ ಶಿಸ್ತು, ಸ್ವಚ್ಛತೆ ಮೌಲ್ಯಗಳನ್ನು ಹೊರತು ಪಡಿಸಿ ಇನ್ನಾವ ಮೌಲ್ಯಗಳನ್ನು ಮಕ್ಕಳ ಮೇಲೆ ಒತ್ತಾಯಿಸಲು ಸಾಧ್ಯವಾಗುವುದಿಲ್ಲ. ಒತ್ತಾಯದಿಂದ ಅವರನ್ನು ಸತ್ಯವಂತರನ್ನು ಹಾಗೂ ನ್ಯಾಯವಂತರನ್ನಾಗಿ ಮಾಡಲು ಬರುವುದಿಲ್ಲ. ಇಂತಹ ಸದ್ಗುಣಗಳು ಆಂತರಿಕವಾಗಿಯೇ ಬೆಳೆಯಬೇಕೆ ವಿನಹ ಬಲಾತ್ಕಾರದಿಂದಲ್ಲ. ವ್ಯಕ್ತಿಯಲ್ಲಿ ಮನಃಪೂರ್ವಕವಾಗಿ ಇವು ಬೇರೂರಬೇಕು. ಅಂತರಂಗದಲ್ಲಿ ಚಿಗುರೊಡೆಯಬೇಕು ಆವಾಗ ಮಾತ್ರ ಆ ವ್ಯಕ್ತಿ ಈ ಸದ್ಗುಣಗಳನ್ನು ಗೆದ್ದುಕೊಳ್ಳಲು ಸಾಧ್ಯವಿದೆ.

ಇವುಗಳನ್ನು ಮಕ್ಕಳಲ್ಲಿ ಬೆಳೆಸಲು ಚರ್ಚಾಪದ್ಧತಿಯನ್ನು ಬಳಸ ಬಹುದು. ಇಲ್ಲಿ ಮಕ್ಕಳಿಗೆ ಮೌಲ್ಯಗಳ ತಿಕ್ಕಾಟ ಉಂಟಾಗುವ

ಹಲವು ಸಂದರ್ಭಗಳನ್ನು, ಸಮಸ್ಯೆಗಳನ್ನು ನೀಡಿ ಅಲ್ಲಿ ಅವರಿಗೆ ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ನಿರ್ಣಯಿಸಲು ಬಿಡಬೇಕು. ಸತ್ಯದ ಅವಶ್ಯಕತೆ ಇದೆಯೇ? ಸಾಮಾಜಿಕ ಬಾಂಧವ್ಯ ಬೇಕೆ? ಮನುಷ್ಯ ಮೌಲ್ಯಗಳನ್ನು ಬಿಟ್ಟು ಬದುಕಲು ಸಾಧ್ಯವೇ? ಶ್ರಮ ದಾನವು ಏಕೆ ಬೇಕು? ಎಂಬೆಲ್ಲ ಅಂಶಗಳನ್ನು ಮಕ್ಕಳು ತಮ್ಮ ವಿಚಾರಗಳ ಮೂಲಕ ನಿರ್ಧರಿಸುವಂತೆ ಮೌಲ್ಯ ಶಿಕ್ಷಣವು ಅವರನ್ನು ಸಮರ್ಥರನ್ನಾಗಿಸಬೇಕು. ಇಂತಹ ಶಿಕ್ಷಣವೇ ನಿಜವಾದ ಮೌಲ್ಯ ಶಿಕ್ಷಣ ಅಥವಾ ನೀತಿ ಶಿಕ್ಷಣ.

ಶಿಕ್ಷಕರಿಗೆ ಹೊಸದನ್ನು ಕಂಡು ಹಿಡಿಯುವ ಮತ್ತು ಸರಿಯಾದ ಸಂಪರ್ಕ ಪದ್ಧತಿಗಳನ್ನು ಸಂಶೋಧಿಸಲು ಸ್ವಾತಂತ್ರ್ಯವನ್ನು ಕೊಡುವುದು. ಒಂದು ಸಮೂಹಕ್ಕೆ ಸಂಬಂಧಿಸಿದ ಅವಶ್ಯಕತೆಗಳನ್ನು ಅದಕ್ಕೆ ಸಾಧ್ಯವಾಗುವ ಚಟುವಟಿಕೆಗಳನ್ನು ಸಂಶೋಧಿಸಲು ಸ್ವಾತಂತ್ರ್ಯ ಕೊಡುವುದು ಅವಶ್ಯಕವಾದುದು.

ಎಲ್ಲ ಮೌಲ್ಯಗಳು ಪರಸ್ಪರ ಸಂಬಂಧ ಹೊಂದಿವೆ. ಒಂದನ್ನು ಬಿಟ್ಟು ಮತ್ತೊಂದನ್ನು ಬೆಳೆಸಲು ಸಾಧ್ಯವಿಲ್ಲ. ಸಮಂಜಸವೂ ಅಲ್ಲ. ಒಟ್ಟಿನಲ್ಲಿ ಮಕ್ಕಳು ಮೌಲ್ಯಗಳನ್ನು ಸಾಕಾರಗೊಳಿಸುವಂತೆ ಪ್ರಯತ್ನಿಸುವುದು ನಿರಂತರ ಅವಶ್ಯಕವಾಗಿದೆ. ಎಲ್ಲಾ ನೈತಿಕ ಗುಣಗಳನ್ನು ಒಂದೇ ಹಂತದಲ್ಲಿ ರೂಪಿಸಲು ಸಾಧ್ಯವಾಗದಿದ್ದರೂ ಬೇರೆ ಬೇರೆ ಹಂತಗಳಲ್ಲಿ ಮೌಲ್ಯಗಳ ಸ್ವರೂಪವನ್ನು ಅರಿತು ಅನುರೂಪವಾದವುಗಳನ್ನು ಮಕ್ಕಳಲ್ಲಿ ಬೆಳೆಸಬೇಕು. ಅಸಂಖ್ಯಾತ ಮೌಲ್ಯಗಳನ್ನು ಶಾಲೆ

ಯಲ್ಲಿ ಬೆಳೆಸಲು ಆಗುತ್ತಿಲ್ಲವೆಂದು ಮೊರೆಯುವ ಕೆಲವರು ತಮ್ಮ ದೃಷ್ಟಿಯನ್ನು ಮಿತಗೊಳಿಸುವುದುಂಟು. ಏನೇ ಇದ್ದರೂ ಕೆಳಗಿನ ಐದು ಮೌಲ್ಯಗಳನ್ನು ಬೋಧಿಸುವುದು ಉಚಿತವೆಂದು ಭಾವಿಸಲಾಗಿದೆ. ನೂರಾರು ಶಿಕ್ಷಕರ, ಶಿಕ್ಷಣ ಚಿಂತಕರ ಸಲಹೆ-ಸೂಚನೆಯ ಮೇರೆಗೆ ಕೆಳಗಿನವುಗಳನ್ನು ಅಂಗೀಕರಿಸಿ, ಅವುಗಳನ್ನು 'ಮೂಲಭೂತ'ಗಳೆಂದು ಕರೆಯಲಾಗಿದೆ.

## ೧. ಸ್ವಚ್ಛತೆ:

ಸ್ವಚ್ಛತೆ ಎಂದರೆ ಸಂಕುಚಿತಾರ್ಥದಲ್ಲಿ ಕೆಸರು, ಮಿಶ್ರಣ ಮತ್ತು ಭ್ರಷ್ಟತೆಗಳಿಂದ ಮುಕ್ತವಾಗಿರುವುದು ಎಂದಾಗುತ್ತದೆ. ಇನ್ನು ವಿಶಾಲಾರ್ಥದಲ್ಲಿ ಅಪರಾಧ, ಅಸಂಬದ್ಧತೆ ಮತ್ತು ಕಲ್ಮಶಗಳಿಂದ ದೂರವಾಗಿರುವುದು ಎಂದರ್ಥ. ಅಶುಚಿತ್ವವು ಮನಸ್ಸು ಹಾಗೂ ದೇಹಗಳೆರಡನ್ನೂ ಮಲಿನಗೊಳಿಸುತ್ತದೆ. ಆದಕಾರಣ ಮನಸ್ಸು-ದೇಹಗಳೆರಡನ್ನೂ ನಿಷ್ಕಲ್ಮಶವಾಗಿ ಇಡುವುದೇ ಶುಚಿತ್ವವೆನಿಸುವುದು. ಶುಚಿತ್ವವು ವ್ಯಕ್ತಿಯ ಘನತೆ ಗಾಂಭೀರ್ಯವನ್ನು ಹೆಚ್ಚಿಸುತ್ತದೆ. ಅಲ್ಲದೇ ಅವನ ಸಹಚರರಿಗೆ ಸ್ವಚ್ಛತೆಯ ಅರಿವನ್ನು ಒತ್ತಿ ಹೇಳುತ್ತದೆ. ಸ್ವಚ್ಛತೆಯು ಶುದ್ಧ ಮತ್ತು ಉಚಿತ ಜೀವನ ಶೈಲಿಯನ್ನು ಅನುಸರಿಸುವಂತೆ ವ್ಯಕ್ತಿಯನ್ನು ಅಭಿಪ್ರೇರಿಸುತ್ತದೆ. ಶುಚಿತ್ವದಿಂದ ವ್ಯಕ್ತಿಯ ಬದುಕು ವ್ಯವಸ್ಥಿತ ಸೂತ್ರಗಳನ್ನು, ಆರೋಗ್ಯಕರ ಸ್ಥಿತಿಯನ್ನು ಮತ್ತು ಕ್ರಮಬದ್ಧತೆಯನ್ನು ಹೊಂದುತ್ತದೆ. ಬಾಹ್ಯ ಸ್ವಚ್ಛತೆಯು ಅಂತರ್ ಶುಚಿತ್ವದ ಪ್ರತಿಫಲನ, ಆತ್ಮಶುದ್ಧಿಯ ಪ್ರತೀಕವೆಂತಲೂ ನಿಗದಿಗೊಳಿಸಬಹುದು.

## ೧. ಸತ್ಯಸಂದತೆ

'ಸತ್ಯಸಂಧತೆಗಿಂತ ಸಮೃದ್ಧವಾದ ಆಸ್ತಿ ಬೇರೊಂದಿಲ್ಲ' ಎಂದು ಶೇಕ್ಸ್‌ಪಿಯರ್ ಹೇಳಿದ್ದಾನೆ. ಸತ್ಯಂ, ಶಿವಂ, ಸುಂದರಂ ಎಂಬ ಶಾಶ್ವತ ಮೌಲ್ಯಗಳನ್ನು ನಮ್ಮ ಪುರಾಣ–ಮಹಾಕಾವ್ಯಗಳು ಇಡೀ ಜನಾಂಗಕ್ಕೆ ಸಾದರಪಡಿಸಿವೆ. ಹೀಗಾಗಿ ಈ ಮೌಲ್ಯದ ತಾತ್ಪರ್ಯ ಪ್ರಶ್ನಾತೀತ. ಇದು ವ್ಯಕ್ತಿಯನ್ನು ವಸ್ತುನಿಷ್ಠವಾಗಿ ವರ್ತಿಸುವಂತೆ ಪ್ರೇರೇಪಿಸುತ್ತದೆ. ಸತ್ಯದ ಅನುಕರಣೆ ವ್ಯಕ್ತಿಯ ಆಂತರಿಕ ಗುಣ. ವ್ಯಕ್ತಿಯ ಸ್ಥಾನ–ಮಾನ, ಘನತೆ ಮತ್ತು ಗೌರವಗಳನ್ನು ಅದು ಹೆಚ್ಚಿಸುತ್ತದೆ. ಸತ್ಯಾನುಸರಣೆಯು ಕಪಟ, ಜೂಜು, ವಂಚನೆಯನ್ನು ಪ್ರತಿಘಟಿಸುತ್ತದೆ.

## ೨. ಶ್ರಮ ದುಡಿಮೆ:

'ಕಾಯಕವೇ ಕೈಲಾಸ' ಎಂಬ ಬಸವಣ್ಣನವರ ಉಕ್ತಿ ಶ್ರಮ ದುಡಿಮೆಯ ಅಗತ್ಯ ಮತ್ತು ಮಹತ್ವವನ್ನು ಸಾರುವ ಸ್ಪಷ್ಟ ನಿದರ್ಶನ. ಶ್ರಮಗೊದಗಿದ ಕೆಲಸವನ್ನು ನಿಯುಕ್ತಿನಿಂದ ಕಷ್ಟ ಸಹಿಷ್ಣುಗಳಾಗಿ ನೆರವೇರಿಸಿಕೊಂಡು ಹೋಗುವುದೇ ಶ್ರಮ ದುಡಿಮೆ. ಮಕ್ಕಳಿಗೆ ಶ್ರಮ ದುಡಿಮೆಯ ಬೆಲೆ ಗೊತ್ತಾಗಬೇಕು. ತಾವೇ ಸ್ವತಃ ಶ್ರಮಿಸಿ ಕೆಲಸ ಮಾಡುವುದರಿಂದ ತೃಪ್ತಿ ಹಾಗೂ ಅಭಿಮಾನಗಳು ಬೆಳೆಯುವವು. ಈ ದೃಷ್ಟಿಯಿಂದಲೇ ಮಹಾತ್ಮ ಗಾಂಧೀಜಿಯವರು ಮೂಲ ಶಿಕ್ಷಣವನ್ನು ಜಾರಿಯಲ್ಲಿ ತಂದರು. ಹೀಗೆ ಆಳಾಗಿ ದುಡಿ, ಅರಸನಾಗಿ ಉಣ್ಣು ಎಂಬ ಗಾದೆ ಮಾತಿನಂತೆ ಕೆಲಸದಿಂದ ಸೃಜನಾತ್ಮಕ ಶಕ್ತಿ ಹೆಚ್ಚುವುದು.

## ೪) ಸಮಾನತೆ :

ಎಲ್ಲರೂ ಸ್ವತಂತ್ರರಾಗಿಯೇ ಹುಟ್ಟುತ್ತಾರೆ. ಸೃಷ್ಟಿಯ ದೈವಿಕ ಕೊಡುಗೆಗಳಲ್ಲಿ ಯಾರಿಗೂ ಭಿನ್ನತೆಯಿಲ್ಲ. ಘನತೆ-ಗೌರವ ಹೊಂದುವಲ್ಲಿ ಮತ್ತು ಮಾನವ ಹಕ್ಕುಗಳನ್ನು ಪಡೆಯುವಲ್ಲಿ ಸರ್ವರಿಗೂ ಸಮಾನ ಅವಕಾಶಗಳಿವೆ. 'ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು' ಎಂದು ಹೇಳಿದ ಕುವೆಂಪುರವರ ನುಡಿ ಸಾರ್ವಕಾಲಿಕ ಸತ್ಯ. ಆದ್ದರಿಂದ ಯಾರಿಗೂ ತಾರತಮ್ಯ, ಮೇಲು-ಕೀಳು ಸಲ್ಲದು. ಅಸಮಾನತೆಯನ್ನು ಪ್ರತಿಭಟಿಸ ಬೇಕಾದುದು ಸರ್ವರ ಕರ್ತವ್ಯ. ಸ್ವಾತಂತ್ರ್ಯ, ಸೌಲಭ್ಯಗಳನ್ನು ಎಲ್ಲರಿಗೂ ಸಮನಾಗಿ ಹಂಚಬೇಕಾದುದು ಅನಿವಾರ್ಯ. ಸಮಾನ ತೆಯು ಕೇವಲ ಬದುಕಿನ ಅಸ್ತಿತ್ವಕ್ಕಾಗಿ ಮಾತ್ರವಲ್ಲ. ವ್ಯಕ್ತಿ ಮತ್ತು ಸಮಾಜದ ಔನ್ನತ್ಯ, ಅವೆರಡರ ಸರ್ವತೋಮುಖ ಏಳ್ಗೆಗಳು ಈ ತತ್ವದ ಹಿನ್ನೆಲೆಯಲ್ಲಿ ಅಡಗಿರುವಂತಹವುಗಳು. ಸಮಾನತೆಯನ್ನು ಸಾಧಿಸುವುದೇ ಸದ್ಯದ ಸರಕಾರ ಮತ್ತು ಸಮಾಜದ ಪ್ರಮುಖವಾದ ಗುರಿ. ಜಾತಿ, ಮತ, ಪಂಥ, ಭಾಷೆ, ಇತ್ಯಾದಿಗಳ ಸಂಕುಚಿತತೆಯನ್ನು ಮೀರಿ ನಿಂತ ಮೇರುಗುಣ ಈ ಸಮಾನತೆ. ಪ್ರತಿಯೊಬ್ಬರಿಗೆ ತಮ್ಮ ಅಂತಃಶಕ್ತಿಗಳನ್ನು, ಸಾಮರ್ಥ್ಯಗಳನ್ನು ವಿಕಸಿಸಿಕೊಳ್ಳಲು ಅವಕಾಶವಿರಬೇಕೆಂಬುದೇ ಸಮಾನತೆಯ ತತ್ವದ ತಿರುಳು. ಸಮಸ್ತ ಜನತೆಯಲ್ಲಿ ಶಾಂತಿ ಸಮರಸವನ್ನು ವರ್ಧಿಸುವ ಪ್ರಚಂಡ ಶಕ್ತಿ ಇದರಲ್ಲಿದೆ. ಆದ್ದರಿಂದ ಈ ಮೌಲ್ಯವನ್ನು ಬೆಳೆಸಬೇಕಾದುದು ಅತೀ ಅವಶ್ಯಕ. ಅದೂ ಭಾರತದಂತಹ ಜಾತ್ಯಾತೀತ ರಾಷ್ಟ್ರದಲ್ಲಿ ಸಮಾನತೆಯ ಮೌಲ್ಯಕ್ಕೆ ಎಲ್ಲಿಲ್ಲದ ಪ್ರಾಶಸ್ತ್ಯ ಹಾಗೂ ಪುರಸ್ಕಾರ ಗಳು ಸಿಗಲೇಬೇಕು.

**೫) ಸಹಕಾರ :**

ಇದೊಂದು ಸಾಮಾಜಿಕ ಗುಣ. ಕುಟುಂಬದ ಸಾನಿಧ್ಯದಲ್ಲಿ ನಡೆಯುವ 'ಸಮಾಜೀಕರಣ' ಕ್ರಿಯೆಯಿಂದಲೇ ಈ ಗುಣ ಮೊಳಕೆಯೊಡೆಯುತ್ತದೆ. ಎರಡು ಜೀವಿಗಳ ಮಧ್ಯ ನಡೆಯಬಹುದಾದ ವಿನಿಮಯಕ್ಕೆ ಸಹಕಾರವೆಂದು ಕರೆಯಲಾಗುತ್ತದೆ. ಹಂಚಿಕೊಳ್ಳುವಿಕೆ, ಭಾಗಿದಾರನಾಗುವಿಕೆ ಈ ಎರಡೂ ಪದಗಳು ಸಹಕಾರ ವಿಷಯಕ್ಕೆ ಸಮನಾದ ಪದಗಳು. ಪರಸ್ಪರ ಸಹಕಾರವಿಲ್ಲದೆ ಯಾವ ಸಾಧನೆಯನ್ನೂ ಮಾಡಲು ಸಾಧ್ಯವಿಲ್ಲ. ಈ ಮಾತು ವ್ಯಕ್ತಿ–ವ್ಯಕ್ತಿಗೂ, ರಾಷ್ಟ್ರ–ರಾಷ್ಟ್ರಕ್ಕೂ ಅನ್ವಯಿಸುತ್ತದೆ. ಒಂದಲ್ಲ ಒಂದು ದೃಷ್ಟಿಯಿಂದ ಪ್ರತಿವ್ಯಕ್ತಿ ಮತ್ತು ರಾಷ್ಟ್ರ ಒಬ್ಬರು ಮತ್ತೊಂದನ್ನು ಅವಲಂಬಿಸಿರುತ್ತವೆ.

ಇದಲ್ಲದೆ ಈ ಕೆಳಗಿನಂತೆ ಮಕ್ಕಳ ವಯೋಮಿತಿ ಹಾಗೂ ತರಗತಿಗಳಿಗನುಗುಣವಾಗಿ ಮೌಲ್ಯಗಳನ್ನು ಆಯ್ಕೆ ಮಾಡಿಕೊಂಡು ಶಾಲೆ–ಕಾಲೇಜುಗಳಲ್ಲಿ ಬೋಧನೆ ಮಾಡಬೇಕು.

೧ ದೇಶಭಕ್ತಿ ಮತ್ತು ರಾಷ್ಟ್ರೀಯ ಭಾವೈಕ್ಯತೆ
೨ ಸಾಮಾಜಿಕ ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳು
೩ ಕರ್ತವ್ಯ ನಿರ್ವಹಣೆ
೪ ಸಹಕಾರ ಮತ್ತು ಸಹಾಯ ಮನೋಭಾವ
೫ ಸಹಾನುಭೂತಿ, ಅನುಕಂಪ ಮತ್ತು ಸಹಿಷ್ಣುತೆ
೬ ಧೈರ್ಯ ಮತ್ತು ನಿರ್ಭೀತತೆಯ ಮನೋಭಾವ
೭ ಪರಿಸರ ಮತ್ತು ನೈಸರ್ಗಿಕ ಸಂಪನ್ಮೂಲಗಳ ರಕ್ಷಣೆ
೮ ಭಾರತೀಯ ಸಾಂಸ್ಕೃತಿಕ ಪರಂಪರೆಯ ಬಗ್ಗೆ ಅರಿವು ಮತ್ತು ಗೌರವ

೯ ಚಿಕ್ಕ ಕುಟುಂಬಗಳ ಮಹತ್ವ

೧೦ ಸತ್ಯಾನ್ವೇಷಣೆ

೧೧ ಅಪ್ರಾಮಾಣಿಕತೆ, ಭ್ರಷ್ಟಾಚಾರ, ಅನ್ಯಾಯ ಹಾಗೂ ಸಮಾಜದಲ್ಲಿನ ಶೋಷಣೆಯ ಬಗ್ಗೆ ವಿರೋಧ ಮನೋಭಾವನ್ನು ಬೆಳೆಸುವುದು.

೧೨ ಸಮಾನತೆ

೧೩ ಧರ್ಮ, ಜಾತಿ, ಭಾಷೆ, ಮತ್ತು ಲಿಂಗಗಳ ಮೇಲೆ ಆಧಾರಿತವಾಗಿರುವ ಪೂರ್ವಾಗ್ರಹ ಪೀಡಿತ ಮನೋಭಾವಗಳಿಂದ ದೂರವಿರುವುದು.

೧೪ ಎಲ್ಲ ಧರ್ಮಗಳನ್ನು ಗೌರವಿಸುವುದು ಮತ್ತು ಅವುಗಳ ಮೂಲ ತತ್ವಗಳನ್ನು ತಿಳಿದುಕೊಳ್ಳುವುದು.

೧೫ ಬೇರೆಯವರ ಮನೋಭಾವ ಮತ್ತು ವಿಚಾರಗಳ ಬಗ್ಗೆ ಉದಾತ್ತ ಮನೋಭಾವ ಬೆಳೆಸಿಕೊಳ್ಳುವುದು.

೧೬ ಧೂಮಪಾನ, ಮದ್ಯಪಾನ, ಮಾದಕವಸ್ತುಗಳ ಸೇವನೆ, ಅವುಗಳಿಂದುಂಟಾಗುವ ದುಷ್ಪರಿಣಾಮಗಳನ್ನು ಅರಿತುಕೊಂಡು ಅವುಗಳಿಂದ ದೂರವಾಗಿರುವುದಲ್ಲದೆ, ಇತರರನ್ನು ದುಶ್ಚಟಗಳಿಂದ ಅದಕ್ಕೆ ಬಲಿಯಾಗದಂತೆ ನೋಡಿಕೊಳ್ಳುವುದು.

೧೭ ವಿಶ್ವಭ್ರಾತೃತ್ವ ಮನೋಭಾವ ಬೆಳೆಸುವುದು.

೧೮ ವೈಜ್ಞಾನಿಕ ಮನೋಭಾವ ಬೆಳೆಸುವುದು.

೧೯ ಮೌಲ್ಯಗಳ ಬಗ್ಗೆ ಸ್ಪಷ್ಟ ಚಿಂತನೆ ಅಗತ್ಯ. ವಿದ್ಯಾರ್ಥಿಗಳೊಂದಿಗೆ ಚರ್ಚೆ ಮಾಡಿ ಅವುಗಳ ಬಗ್ಗೆ ಸ್ಪಷ್ಟ ಕಲ್ಪನೆಯನ್ನು ಮಾಡಿಕೊಡಬೇಕು.

೨೦ ಮಕ್ಕಳ ನೈತಿಕ ಬೆಳವಣಿಗೆಗೆ ಶಾಲಾ ಪರಿಸರವು ಪ್ರಭಾವ ಬೀರುತ್ತದೆ. ಆದ್ದರಿಂದ ಶಾಲಾ ಪರಿಸರವು ಉತ್ತಮ ವಾಗಿರಬೇಕು.

೨೧ ಶಿಕ್ಷೆಗಳ ಮೂಲಕ ನೈತಿಕ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸು ವುದು ಸಾಧ್ಯವಿಲ್ಲ. ಆದ್ದರಿಂದ ಪುರಸ್ಕಾರಗಳ ಮೂಲಕ ಉತ್ತಮ ಗುಣಗಳನ್ನು ಬೆಳೆಸಲು ಪ್ರಯತ್ನಿಸಬೇಕು.

೨೨ ಧಾರ್ಮಿಕ ಕಟ್ಟಳೆಗಳ ಮೂಲಕ ಮಕ್ಕಳಲ್ಲಿ ಸತ್ಯ, ನ್ಯಾಯ, ನೀತಿ, ಆಚಾರ-ವಿಚಾರ ಇತ್ಯಾದಿ ಮೌಲ್ಯಗಳನ್ನು ಬೆಳೆಸ ಬೇಕು.

೨೩ ರಚನಾತ್ಮಕ ಕಾರ್ಯಗಳಿಂದ ನೈತಿಕ ಬೆಳವಣಿಗೆ ಉತ್ತಮ ವಾದುದು. ಆದ್ದರಿಂದ ಇದಕ್ಕೆ ಪ್ರೋತ್ಸಾಹ ನೀಡಬೇಕು.

೨೪ ಮಕ್ಕಳಲ್ಲಿರುವ ಸೃಜನಾತ್ಮಕ ಗುಣವನ್ನು ಪತ್ತೆ ಹಚ್ಚಿ, ಮಾರ್ಗದರ್ಶನ ನೀಡಿ ಪ್ರಚೋದಿಸಬೇಕು.

---

# ಆಧಾರ ಗ್ರಂಥಗಳು

1 M Pia Nazareth rjm and Maria E. Waples— *Personal values.* New Delhi; All India Association of Catholic Schools, 1978

2 M Pia Nazareth rjm and Maria E. Waples— *Community values,* New Delhi; All India Association of Catholic Schools, 1979

3 M Pia Nazareth rjm and Maria E. Waples— *Neighbourly values,* New Delhi; All India Association of Catholic Schools, 1979

4 N C E R T— A Project Report; *Effectiveness of Value clarifying strategies in value orientation of B. Ed. students.* New Delhi, 1986

5 T. Raymont— *The Principles of Education,* Orient Longmans, Calcutta, 1960

6 K. K. Bhatia & C. L. Narang— A First Course in *Philosophical and Sociological Foundations of Educations,* Prakash Brothers, 1985

7 S. E. R. T.— ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ, ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತಗಳ 'ಸಂಪನ್ಮೂಲ ಸಾಮಗ್ರಿ' ೧೯೮೭

# ಉಪನ್ಯಾಸ ಗ್ರಂಥಮಾಲೆಯ ಕೆಲವು ಪ್ರಕಟನೆಗಳು

---

೧ ಭೂಸಾರ ಸಂರಕ್ಷಣೆ ಹಾಗೂ ರಾಸಾಯನಿಕ ಗೊಬ್ಬರಗಳು
—ವಿರೂಪಾಕ್ಷ ಬಡಿಗೇರ

೨ ಸಮೂಹ ಮಾಧ್ಯಮಗಳು ಮತ್ತು ರಾಷ್ಟ್ರೀಯ ಅಭಿವೃದ್ಧಿ
—ಎ. ಎಸ್. ಬಾಲಸುಬ್ರಮಣ್ಯ

೩ ವಿಶ್ವದಲ್ಲಿ ಏಕದೇವೋಪಾಸನೆ
—ಬ್ರಹ್ಮಕುಮಾರ ಬಸವರಾಜ ರಾಜಋಷಿ

೪ ಮಡಿವಾಳ ಮಾಚಿದೇವರು
—ಎಸ್. ಕೆ. ಕೊಪ್ಪಾ

೫ ಪರಿಸರ ಸಂರಕ್ಷಣೆ ಹಾಗೂ ಆರ್ಥಿಕಾಭಿವೃದ್ಧಿ
—ಎನ್. ಆರ್. ರಾವ್

೬ ಪ್ರೌಢರ ಜಗತ್ತಿನಲ್ಲಿ ಮಕ್ಕಳು
—ಕೆ. ಜಿ. ಗುರುಮೂರ್ತಿ

೭ ಹಾಲಕ್ಕಿ ಒಕ್ಕಲಿಗರ ಜನಪದ ಗೀತ
—ಎನ್. ಆರ್. ನಾಯಕ

೮ ಅಭಿರುಚಿಗಳು
—ಎ. ಎಸ್. ಧರಣೇಂದ್ರಯ್ಯ

೯ ಕಲ್ಯಾಣ ರಾಜ್ಯದ ಕಲ್ಪನೆ
—ಆರ್. ವ್ಹಿ. ಹೊರಡಿ

೧೦ ಗ್ರಂಥಾಲಯ : ಅಂದು ಇಂದು
—ಎಸ್. ಆರ್. ಗುಂಜಾಳ

---

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ